ಬಾ ಮತ್ತು ಬಾಪು 150ನೇ ವರ್ಷಾಚರಣೆ - ಪುಸ್ತಕ ಮಾಲಿಕೆ

# ನನ್ನ ಕನಸಿನ ಸ್ವರಾಜ್ಯ

# SWARAJ OF MY DREAMS

**Mahatma Gandhi ಮಹಾತ್ಮಾ ಗಾಂಧಿ**



ಇಂಗ್ಲೀಷ್ ಮೂಲ ಮತ್ತು ಕನ್ನಡ ಅನುವಾದ
(English Text with Kannada Translation)
- ಕೆ.ಎಸ್. ನಾರಾಯಣಸ್ವಾಮಿ

ಬಾ-ಬಾಪು 150ನೇ




ವರ್ಷಾಚರಣೆ ಪುಸ್ತಕ ಮಾಲಿಕೆ

# ನನ್ನ ಕನಸಿನ ಸ್ವರಾಜ್ಯ

ಮಹಾತ್ಮ ಗಾಂಧಿ

# Swaraj of My Dreams

**Mahatma Gandhi**

ಇಂಗ್ಲಿಷ್‌ನ ಮೂಲಗ್ರಂಥ ಪಠ್ಯದೊಂದಿಗೆ ಕನ್ನಡಾನುವಾದ
ಕೆ. ಎಸ್. ನಾರಾಯಣಸ್ವಾಮಿ

**(English Text with Kannada Translation)**

ಪ್ರಕಾಶಕರು
**ಕರ್ನಾಟಕ ಗಾಂಧೀ ಸ್ಮಾರಕ ನಿಧಿ**
ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು - 560001, ದೂರವಾಣಿ : 080-22261967

ನನ್ನ ಕನಸಿನ ಸ್ವರಾಜ್ಯ
ಲೇಖಕರು : ಮಹಾತ್ಮ ಗಾಂಧಿ
ಕನ್ನಡಾನುವಾದ : ಕೆ.ಎಸ್. ನಾರಾಯಣಸ್ವಾಮಿ
ಪ್ರಕಾಶಕರು : ಕರ್ನಾಟಕ ಗಾಂಧೀ ಸ್ಮಾರಕ ನಿಧಿ
ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560001
ದೂರವಾಣಿ : 080–22261967

| | | |
|---|---|---|
| ಮೊದಲ ಮುದ್ರಣ | : | 2000 (ಗಾಂಧಿ ಶಾಂತಿ ಪ್ರತಿಷ್ಠಾನದಿಂದ) |
| ಪರಿಷ್ಕೃತ 2ನೇ ಆವೃತ್ತಿ | : | 2018 |
| ಪ್ರತಿಗಳು | : | 1000 |
| ಪುಟಗಳು | : | XVIII + 40 |
| ಬೆಲೆ | : | 42/– |
| ಮುದ್ರಕರು | : | ಕ್ರಿಯೇಟಿವ್‌ಗೀಕ್ಸ್<br>ಯಾಧವ ಕಾಲೇಜು ರಸ್ತೆ, ಮಾಧವನಗರ<br>ಬೆಂಗಳೂರು – 560001<br>ದೂರವಾಣಿ : 080 40927049 |



# ಅರ್ಪಣೆ

ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ
ಕಾರ್ಯದರ್ಶಿಗಳಾಗಿದ್ದ
**ಶ್ರೀ ರಾಮಚಂದ್ರ ವಡವಿ** ಅವರಿಗೆ
ಗೌರವಪೂರ್ವಕವಾಗಿ

# ನಿಮ್ಮೊಂದಿಗೆ

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ಬಾ ಮತ್ತು ಬಾಪು ಅವರ 150ನೇ ವರ್ಷಾಚರಣೆಯನ್ನು ಅರ್ಥಪೂರ್ಣವಾಗಿ ಆಚರಿಸಲು ಹಾಕಿಕೊಂಡಿರುವ ಹಲವಾರು ಕಾರ್ಯ ಯೋಜನೆಗಳಲ್ಲಿ, ಗಾಂಧೀಜಿ ಅವರ ಚಿಂತನೆಗಳು ಮತ್ತು ತತ್ವ ಸಿದ್ಧಾಂತಗಳುಳ್ಳ ಸಾಹಿತ್ಯವನ್ನು ಪ್ರಕಟಿಸುವುದು, ಪ್ರದರ್ಶಿಸುವುದು ಮತ್ತು ವಿತರಿಸುವುದೂ ಪ್ರಮುಖವಾದುದಾಗಿದೆ. ಅದರಂತೆ ಮಹಾತ್ಮಾ ಗಾಂಧಿ ಅವರ Swaraj of My Dreamsನ ಕನ್ನಡಾನುವಾದ "ನನ್ನ ಕನಸಿನ ಸ್ವರಾಜ್ಯ" ಕೃತಿಯನ್ನು ಪ್ರಕಟಿಸಲು ನನಗೆ ಅತ್ಯಂತ ಹರ್ಷವಾಗುತ್ತದೆ. ಶ್ರೀ ಕೆ. ಎಸ್. ನಾರಾಯಣಸ್ವಾಮಿ ಅವರು ಹಿರಿಯ ಗಾಂಧಿ ತತ್ವ ಅನುಯಾಯಿಗಳು. "ಗಾಂಧೀಜಿ ಅವರ ಆಶಯದ ಸ್ವರಾಜ್ಯವನ್ನು ಅವರ ಮಾತುಗಳಲ್ಲಿ ಸಾಂದರ್ಭಿಕ ಚರ್ಚೆಗಳಲ್ಲಿ ಮತ್ತು ಅವರ ಪತ್ರಿಕೆಗಳಲ್ಲಿ ಪ್ರಕಟಿಸಿರುವುದನ್ನು ಸಂಗ್ರಹಿಸಿ ಅಪೂರ್ವ ಕೃತಿಯಾಗಿಸಿ ಓದುಗರಿಗೆ ಒದಗಿಸಿದ್ದಾರೆ. ಅವರಿಗೆ ಗಾಂಧಿ ಭವನವು ಚಿರಋಣಿಯಾಗಿರುತ್ತದೆ.

ಈ ಕೃತಿಯನ್ನು 2000ನೇ ಸಾಲಿನಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನವು ಪ್ರಕಟಿಸಿರುತ್ತಾರೆ. ಈ ಮಹಾನ್ ಕಾರ್ಯಮಾಡಿರುವುದಕ್ಕಾಗಿ ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು ಮತ್ತು ಈ ಕೃತಿಯ ಪರಿಷ್ಕೃತ ಆವೃತ್ತಿಯನ್ನು ಪ್ರಕಟಿಸಲು ಅನುಮೋದನೆ ಕೊಟ್ಟಿರುವ ಗಾಂಧಿ ಶಾಂತಿ ಪ್ರತಿಷ್ಠಾನದವರಿಗೆ ಹೃತ್ಪೂರ್ವಕ ನಮನಗಳು.

ಗಾಂಧೀಜಿ ಅವರು ಪ್ರತಿಪಾದಿಸಿದ ಸತ್ಯ, ಅಹಿಂಸೆ, ಶರೀರ ಶ್ರಮ, ಸೇವಾ ಮನೋಭಾವ ಮತ್ತು ಸಹಕಾರ ಸಿದ್ಧಾಂತಗಳಿಂದ ಮಾತ್ರ ವ್ಯಕ್ತಿಗಳು, ಸಮುದಾಯಗಳು, ಉತ್ತಮ ಸಮಾಜ ಅಥವಾ ಉತ್ತಮ ಗ್ರಾಮ ರಚಿಸಲು ಸಾಧ್ಯವೆಂಬುದನ್ನು ಇಲ್ಲಿ ವಿವರಿಸುತ್ತಾರೆ. ಭಾರತದ ಆತ್ಮ ಗ್ರಾಮಗಳಲ್ಲಿವೆ, ಎಂದು ಹೇಳುತ್ತಾ ಗಾಂಧೀಜಿ ಅವರು ಗ್ರಾಮಗಳ ಸ್ವರಾಜ್ಯದಿಂದ ಮಾತ್ರ ಸಶಕ್ತ ಭಾರತವನ್ನು ಕಟ್ಟಬಹುದೆಂಬುದನ್ನು ಸವಿಸ್ತಾರವಾಗಿ ಈ ಕೃತಿಯಲ್ಲಿ ಹೇಳುತ್ತಾರೆ. ಇಂಥಹ ಅಪೂರ್ವ ಕೃತಿಯನ್ನು ಕನ್ನಡಕ್ಕೆ ಭಾಷಾಂತರಗೊಳಿಸಿದ ಶ್ರೀ ಕೆ.ಎಸ್. ನಾರಾಯಣಸ್ವಾಮಿ ಅವರಿಗೆ ನಾನು ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಗಾಂಧೀಜಿ ಅವರ ಆಶಯದ ಸ್ವರಾಜ್ಯವು ಕೇವಲ ರಾಜಕೀಯ ಸ್ವಾತಂತ್ರ್ಯವನ್ನು ಪಡೆಯುವಂಥಹದ್ದಲ್ಲ, ಅದು ಆರ್ಥಿಕ ಸ್ವಾತಂತ್ರ್ಯದ ಜೊತೆಗೆ, ನೈತಿಕ, ಸಾಮಾಜಿಕ ಮತ್ತು ಧಾರ್ಮಿಕ ಸ್ವಾತಂತ್ರ್ಯವನ್ನು ಪಡೆಯುವುದೇ ಆಗಿದೆ. "ಇದು ಸ್ವರಾಜ್ಯದ ಚಚ್ಚಾಕಾರ; ಯಾವ ಒಂದು ಕೋನ ಮುಕ್ಕಾದರೂ ಅದರ ಸ್ವರೂಪವೇ ನಾಶವಾದೀತು" ಎಂದು ವಿಶ್ಲೇಷಿಸಿದ್ದಾರೆ. ಅದರಂತೆ ಅವರ ದೃಷ್ಟಿಯ ಭಾರತ ಎಂದರೆ "ನಾನು ಎಂಥಹ ಇಂಡಿಯಾಕ್ಕಾಗಿ ಶ್ರಮಿಸಬೇಕಾಗಿದೆ ಎಂದರೆ, ಯಾವ ಇಂಡಿಯಾದಲ್ಲಿ ಕಡು ಬಡವರೂ, 'ಇದು ಅವರ ದೇಶ' ಎಂಬ ಭಾವನೆ ಹೊಂದುವರೋ, ಯಾವುದರಿಂದ ಅವರು ಪ್ರಬಲ ಧ್ವನಿಯಾಗಬಲ್ಲರೋ ಅಂಥಹ ಇಂಡಿಯಾದಲ್ಲಿ ಉಚ್ಛ ಮತ್ತು ನೀಚ ವರ್ಗ ಭೇದವಿಲ್ಲದ ಜನರಿರುವರೋ, ಯಾವ ಇಂಡಿಯಾದಲ್ಲಿ ಎಲ್ಲಾ ಜನ ಸಮುದಾಯಗಳು, ಪರಿಪೂರ್ಣ ಸೌಹಾರ್ದತೆಯಿಂದ ಬದುಕಲು ಸಾಧ್ಯವೋ, ಯಾವ ಇಂಡಿಯಾದಲ್ಲಿ, ಅಸ್ಪೃಶ್ಯತೆಯ ಶಾಪವಿರುವುದಿಲ್ಲವೋ, ಮದ್ಯಪಾನ – ಮಾದಕ ವಸ್ತುಗಳ ದುಶ್ಚಟಗಳಿರುವುದಿಲ್ಲವೋ, ಅಂಥಹ ಇಂಡಿಯಾದಲ್ಲಿ ಮಹಿಳೆಯರು, ಪುರುಷರಷ್ಟೇ ಸಮನಾದ ಹಕ್ಕುಗಳನ್ನು ಅನುಭವಿಸುವರೋ. ಇದರಿಂದಾಗಿಯೇ ಉಳಿದ ಎಲ್ಲಾ ವಿಶ್ವದೊಂದಿಗೆ ನಾವು ಶಾಂತಿಯಿಂದ ಇರಬಹುದೋ – ಅದು ನನ್ನ ಕನಸಿನ ಭಾರತ" ಎಂದಿದ್ದಾರೆ. ಇಂಥಹ ಅಪೂರ್ವ ಕೃತಿಯನ್ನು ಪುನರ್ ಪ್ರಕಟಿಸಲು ಶ್ರಮವಹಿಸಿದ ಗೌ॥ ಕಾರ್ಯದರ್ಶಿಗಳಾದ ಶ್ರೀಮತಿ ಇಂದಿರಾ ಕೃಷ್ಣಪ್ಪ ಅವರಿಗೆ ಆತ್ಮೀಯ ನಮನಗಳು. ಗಾಂಧೀ ಭವನದ ಎಲ್ಲಾ ಸದಸ್ಯರು ಇಂಥಹ ಗಾಂಧಿ ತತ್ವ ಪ್ರಣೀತ ಕಾರ್ಯಕ್ಕೆ ಸಕಲ ಸಹಕಾರವನ್ನು ನೀಡುತ್ತಿರುವುದಕ್ಕೆ ಕೃತಜ್ಞತೆಗಳನ್ನು ತಿಳಿಸುತ್ತೇನೆ.

ಈ ಪರಿಷ್ಕೃತ ಆವೃತ್ತಿಯನ್ನು ಅಂದವಾದ ವಿನ್ಯಾಸದೊಂದಿಗೆ ಮುದ್ರಿಸಿದ ಕ್ರಿಯೇಟಿವ್ ಗೀಕ್ಸ್‌ನ ಶ್ರೀ ಮಹೇಶ್ ಮತ್ತು ತಂಡದವರಿಗೆ ಗಾಂಧೀ ಭವನದ ಪರವಾಗಿ ನಮನಗಳು ಸಲ್ಲುತ್ತವೆ.

ಡಾ. ವೂಡೇ ಪಿ. ಕೃಷ್ಣ
ಅಧ್ಯಕ್ಷರು
ಕರ್ನಾಟಕ ಗಾಂಧೀ ಸ್ಮಾರಕ ನಿಧಿ

ಬೆಂಗಳೂರು
ನವೆಂಬರ್ 27, 2018

# ನಮ್ಮ ನಮ್ಮಲ್ಲಿ

ಬಾ ಮತ್ತು ಬಾಪು ಅವರ 150ನೇ ವರ್ಷಾಚರಣೆಯ ಸುಸಂದರ್ಭದಲ್ಲಿ, ಮಹಾತ್ಮಾಜೀ ಅವರ ಈ ಕೃತಿಯನ್ನು ಲೋಕಾರ್ಪಣೆ ಮಾಡಲು ಹರ್ಷವೆನಿಸುತ್ತದೆ. ಗಾಂಧೀಜಿ ಅವರ 'ನನ್ನ ಕನಸಿನ ಸ್ವರಾಜ್ಯ' ಕೃತಿಯು ಮೂಲ ಆಂಗ್ಲ ಭಾಷೆಯಲ್ಲಿದ್ದು, ಅದನ್ನು ಕನ್ನಡಕ್ಕೆ ಸಮರ್ಪಕವಾಗಿ ಭಾಷಾಂತರಗೊಳಿಸಿದ ಕೀರ್ತಿ ಶ್ರೀ ಕೆ.ಎಸ್. ನಾರಾಯಣಸ್ವಾಮಿ ಅವರಿಗೆ ಸಲ್ಲುತ್ತದೆ. ಗಾಂಧಿ ಭವನದ ಮಾಜಿ ಕಾರ್ಯದರ್ಶಿಗಳು ಆಗಿದ್ದು, ಗಾಂಧೀಜಿ ಅವರ ಸಿದ್ಧಾಂತಗಳಂತೆ ಬದುಕುತ್ತಿದ್ದ, ನಾರಾಯಣಸ್ವಾಮಿ ಅವರಿಗೆ ಮಾತ್ರ ಗಾಂಧೀಜಿ ಅವರ ಈ ಅತ್ಯಪೂರ್ವ ಕೃತಿಯನ್ನು ಅನುವಾದಗೊಳಿಸಲು ಸಾಧ್ಯವಾಗಿದೆ. ಗಾಂಧೀಜಿ ಅವರನ್ನು ಸಮಗ್ರವಾಗಿ ಅರ್ಥೈಸಿಕೊಂಡಿರುವ ಲೇಖಕರು, ಅವರ ಬರಹ, ಭಾಷಣ, ಪತ್ರಿಕಾ ವರದಿ ಮತ್ತು ಪತ್ರಗಳು ಇನ್ನೂ ಮುಂತಾದ ದಾಖಲೆಗಳಿಂದ ಭಾರತದ ಇತಿಹಾಸವನ್ನು ನಮ್ಮ ಅರಿವಿಗೆ ಇಲ್ಲಿ ತೆರೆದಿಟ್ಟಿದ್ದಾರೆ. ವಸಾಹತುಶಾಹಿಯಿಂದ ಪ್ರಜಾಪ್ರಭುತ್ವದೆಡೆಗೆ ಕೊಂಡೊಯ್ದು ಮಹಾನ್ ದಾರ್ಶನಿಕ ಗಾಂಧೀಜಿ ಅವರ 'ಸ್ವರಾಜ್ಯ'ದ ತತ್ವಗಳು, ಆದರ್ಶಗಳು ಮತ್ತು ಉದ್ದೇಶಗಳು ಏನಾಗಿದ್ದವು ಎಂಬುದನ್ನು ಈ ಕೃತಿ ವಿಶ್ಲೇಷಿಸುತ್ತದೆ. ಭೂಭಾಗವೊಂದರಲ್ಲಿನ ಪ್ರಜೆಗಳು ತಮ್ಮದೇ ರಾಜ್ಯ, ದೇಶ ಕಟ್ಟಿಕೊಳ್ಳಬೇಕೆಂದು ಇಚ್ಛಿಸಿದಲ್ಲಿ ಯಾವ ಸ್ವರೂಪದ, ಯಾವ ತಳಹದಿಯ ಮತ್ತು ಯಾವ ಮೂಲಾಧಾರಗಳಿಂದ ಸ್ವರಾಜ್ಯವನ್ನು ನಿರ್ಮಾಣ ಮಾಡಿಕೊಳ್ಳಬೇಕೆಂಬುದನ್ನು ಗಾಂಧೀಜಿ ಅವರು ಇಲ್ಲಿ ವಿವರಿಸುತ್ತಾರೆ. ಅವರ ಪೂರ್ಣ ಸ್ವರಾಜ್ಯದ ಸಿದ್ಧಾಂತವು ಈ ದೇಶದ ಕಟ್ಟಕಡೆಯ ಜನರ ದುಡಿಮೆ, ಬದುಕು, ಸ್ವಾತಂತ್ರ್ಯ ಮತ್ತು ಸಮಾನತೆಯ ಬುನಾದಿ ಮೇಲೆ ನಿಂತಿದೆ. 'ಹಿಂದ್ ಸ್ವರಾಜ್' ಎಂದರೆ ಸರ್ವಜನತೆಯ ಪ್ರಭುತ್ವವಾಗಿದೆ. ಅವರು 'ಗ್ರಾಮ ಭಾರತದ' ಕಲ್ಪನೆಯಲ್ಲಿ ಆರ್ಥಿಕ ಸಮಾನತೆ, ಪ್ರಯತ್ನಪೂರ್ವಕವಾಗಿ "ಬೇಕು"ಗಳ ಮಿತಿಗೊಳಿಸುವಿಕೆ ದುಡಿಮೆಯ

ಘನತೆ, ಹಕ್ಕುಗಳಿಗನುಗುಣವಾದ ಕರ್ತವ್ಯ ನಿರ್ವಹಣೆ, ಸ್ವಾವಲಂಬನೆ ಮತ್ತು ಸಹಕಾರಗಳೇ ಆಧಾರ ಸ್ತಂಭಗಳಾಗಿವೆ.

ಅವರು ಭಾರತವನ್ನು ಸತ್ಯ, ಅಹಿಂಸೆ, ಸ್ವಾವಲಂಬನೆ ಮತ್ತು ಸಮಾನ ನ್ಯಾಯದ ಭೂಮಿಕೆಯಾಗಬೇಕೆಂದು ಆಶಿಸಿದ್ದರು. ಅಂಥಹ ಮಹದಾಸೆಯನ್ನು, ಸಾಕಾರಗೊಳಿಸಲು ಪ್ರಾಮಾಣಿಕವಾಗಿ, ನಿಸ್ವಾರ್ಥಿಯಾಗಿ ಮತ್ತು ಸರಳವಾಗಿ, ಬದುಕುತ್ತಾ ಜೀವನವನ್ನೇ ಪ್ರಯೋಗಶಾಲೆ ಮಾಡಿಕೊಂಡ ಸತ್ಯಾರ್ಥಿ ಗಾಂಧೀಜಿ ಅವರನ್ನು ಲೇಖಕರು ನಮ್ಮ ಮುಂದೆ ಅನಾವರಣಗೊಳಿಸಿದ್ದಾರೆ.

ಈ ಕೃತಿಯನ್ನು ಪ್ರಥಮವಾಗಿ ಪ್ರಕಟಿಸಿದ ಗಾಂಧಿ ಶಾಂತಿ ಪ್ರತಿಷ್ಠಾನದವರಿಗೆ ಅಭಿನಂದನೆಗಳು ಸಲ್ಲುತ್ತವೆ ಮತ್ತು ಪ್ರಸ್ತುತ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಜೇರಿಗೆ ಲೋಕೇಶ್ ಅವರಿಗೆ ಮತ್ತು ಕಾರ್ಯದರ್ಶಿಗಳಾದ ಶ್ರೀ ರಾಮಲಿಂಗೇಶ್ವರ ಅವರು ಈ ಕೃತಿಯನ್ನು ಗಾಂಧಿ ಭವನದಿಂದ ಪರಿಷ್ಕೃತ ಆವೃತ್ತಿಯಾಗಿ ಮರುಮುದ್ರಣಗೊಳಿಸಲು ಅನುಮೋದನೆ ಕೊಟ್ಟಿರುತ್ತಾರೆ. ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ಈ ಕೃತಿಯನ್ನು ಮರುಮುದ್ರಣಗೊಳಿಸಿ ಪ್ರಕಟಿಸಲು ಸಹಕರಿಸಿದ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಎಲ್ಲಾ ಸದಸ್ಯರುಗಳಿಗೂ ಕೃತಜ್ಞತೆಗಳು ಸಲ್ಲುತ್ತವೆ. ಇಂಥಹ ಅಪೂರ್ವ ಕೃತಿಗಳನ್ನು ಈ ವರ್ಷಾಚರಣೆಯಲ್ಲಿ ಪ್ರಕಟಿಸಲು ಸದಾ ಉತ್ಸುಕರಾಗಿರುವ ಗಾಂಧೀ ಭವನದ ಅಧ್ಯಕ್ಷರಾಗಿರುವ ಡಾ. ವೂಡೇ ಪಿ. ಕೃಷ್ಣ ಅವರಿಗೆ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ. ಇದನ್ನು ಅಂದವಾಗಿ ಮುದ್ರಿಸಿದ ಕ್ರಿಯೇಟಿವ್‌ಗೀಕ್ಸ್‌ನ ಮಹೇಶ್ ಮತ್ತು ತಂಡಕ್ಕೆ ಆತ್ಮೀಯ ನಮನಗಳು.

ಬೆಂಗಳೂರು | ಇಂದಿರಾ ಕೃಷ್ಣಪ್ಪ
ನವೆಂಬರ್ 26, 2018 | ಗೌ॥ ಕಾರ್ಯದರ್ಶಿ

# ಅರಿಕೆ

ಇಪ್ಪತ್ತೊಂದನೆಯ ಶತಮಾನದ ಮಾನವ ಜಗತ್ತು ಅತಿವೇಗವಾಗಿ ಒಂದೇ ಬೃಹತ್ ರೂಪದ ಚೈತನ್ಯಮಯ ಪರಸ್ಪರ ಸಹಕಾರೀ ವಿಶ್ವಸಮಾಜವಾಗಲು ಕಾತರತೆಯಿಂದ ಧಾವಿಸುತ್ತಿರುವಂತಿದೆ. ಆದರೆ ಅಂತಹ ಸಿದ್ಧಿ ಶ್ರೀ ಸಾಮಾನ್ಯನ ಸರ್ವ ವಿಧ ಅಭ್ಯುದಯಕ್ಕೂ, ಸಾರ್ಥಕ ಬದುಕಿನ ವಿಕಾಸಕ್ಕೂ ಕಾರಣವಾಗಬೇಕಾದರೆ ಈಗಿನ ರಾಜಕೀಯ, ಆರ್ಥಿಕ, ಸಾಮಾಜಿಕ ರಚನೆಗಳಲ್ಲಿನ ಮೂಲತತ್ವಗಳೆಲ್ಲವೂ ಮಾನವ ಸಾಪೇಕ್ಷವಾಗಿ ಪರಿವರ್ತಿತವಾಗಬೇಕಾಗಿದೆ. ಆಧುನಿಕ ಚಿಂತಕರನೇಕರು ಇದನ್ನು ಪ್ರತಿಪಾದಿಸುತ್ತಿದ್ದಾರೆ.

"ನಮ್ಮ ಮುಂದಿನ ದೃಷ್ಟಿ ಮನುಜಮತ, ವಿಶ್ವಪಥ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ ಎಂಬ ಪಂಚಮಂತ್ರಕ್ಕೆ ಬದ್ಧವಾಗಬೇಕು" ಎಂದರು ರಾಷ್ಟ್ರಕವಿ ಕುವೆಂಪು.

ಯಾವ ಭಾವನೆಗಳು ಜಗತ್ತಿನ ಎಲ್ಲ ಮಾನವರಿಗೂ ಅನ್ವಯವಾಗಬಹುದೋ ಅವು ಮಾತ್ರವೇ ನಾಳಿನ ಜಗತ್ತಿಗೆ ಅನ್ವಯವಾಗುವಂತೆ ಮಾನ್ಯವಾಗಬಲ್ಲವು. ಇಂದಿನ ರಾಜ್ಯನೀತಿ ಮತ್ತು ಸಂಪ್ರದಾಯಬದ್ಧ ಮತಗಳ ಕಾಲ ಮುಗಿದು ವೈಜ್ಞಾನಿಕತೆ ಮತ್ತು ಆಧ್ಯಾತ್ಮಿಕತೆಯ ಕಾಲ ಬರಲಿದೆ ಎನ್ನುತ್ತಾರೆ ವಿನೋಬಾಜಿ.

ಸ್ವಾತಂತ್ರ್ಯ ಸಮರದ ಕಾಲಕ್ಕೆ ಗಾಂಧೀಜಿ ರೂಪಿಸಿಕೊಟ್ಟ ಸ್ವರಾಜ್ಯದ ಆದರ್ಶ ಅಂಥ ಮಾದರಿಯ ಪ್ರತಿರೂಪ. ಬರಲಿರುವ ಪೀಳಿಗೆಗಳು ಈ ಮಹೋನ್ನತ ಗುರಿಯನ್ನು ಸಾಧಿಸಲು ಗಾಂಧೀಜಿಯ ಮಾತುಗಳೇ, ಅವರ ಪ್ರಯೋಗಗಳೇ ನಮಗಿರುವ ಮಾರ್ಗದರ್ಶಿ. ಆ ದಿಸೆಯಲ್ಲಿ ವಿದ್ಯಾವಂತ ಯುವ ಪೀಳಿಗೆ ಸ್ವಾಭಿಮಾನದಿಂದಲೂ, ಸ್ವತಂತ್ರ ಚಿಂತನದಿಂದಲೂ ನಾಡಿನ ಭವಿಷ್ಯವನ್ನು ರೂಪಿಸಲು ಈ ಚಿಕ್ಕ ಹೊತ್ತಿಗೆ ಸ್ಫೂರ್ತಿ ನೀಡಲೆಂದು ವಿನಯಪೂರ್ವಕವಾಗಿ ಸಮರ್ಪಿಸುತ್ತಿದ್ದೇನೆ.

ಕೆ. ಎಸ್. ನಾರಾಯಣಸ್ವಾಮಿ
ಗೌ॥ ಕಾರ್ಯದರ್ಶಿ (1981–86)
ಕ.ಗಾಂ.ಸ್ಮಾ.ನಿ.

# ಪ್ರಸ್ತಾವನೆ

ರಾಜ್ಯ ವ್ಯವಸ್ಥೆ ಮಾನವ ಇತಿಹಾಸದ ಅತಿ ಪ್ರಾಚೀನ ಸಂಸ್ಥೆ. ಸಮಾಜದ ನೆಮ್ಮದಿಗೆ ಒಂದು ಶಾಸನವ್ಯವಸ್ಥೆ ಅತ್ಯಗತ್ಯವೆನ್ನುವುದನ್ನು ಸುಮಾರು ನಲವತ್ತು ಸಾವಿರ ವರ್ಷಗಳಿಗೂ ಪೂರ್ವದಲ್ಲಿ ಆದಿಮಾನವ ಸಮೂಹ ಕಂಡುಕೊಂಡಿರಬೇಕೆಂದು ಸಮಾಜ ಶಾಸ್ತ್ರಜ್ಞರು ಊಹಿಸುತ್ತಾರೆ. ಈ ಶಾಸನ ವ್ಯವಸ್ಥೆ ಯಾವ ಮೌಲ್ಯಗಳ ಮೇಲೆ ನಿರ್ಧಾರವಾಗಬೇಕು ಎಂಬ ಚಿಂತನೆಯೂ ಬಹಳ ಪ್ರಾಚೀನವಾದುದು. ಭಾರತದ ಅತ್ಯಂತ ಪ್ರಾಚೀನ ಗ್ರಾಮ ಸಮಾಜಗಳಲ್ಲಿನ ಕರ್ತವ್ಯ ವಿಭಜನೆಯ ಪರಸ್ಪರ ಸಹಕಾರೀ ಜೀವನವ್ಯವಸ್ಥೆ ನಮಗೆ ಕಾಣುವ ಮೊಟ್ಟಮೊದಲ ಶಾಸನಬದ್ಧ ವ್ಯವಸ್ಥೆ. ಪ್ರತಿಯೊಬ್ಬ ಪ್ರಜೆಗೂ ಒಂದು ನಿರ್ದಿಷ್ಟ ಸ್ಥಾನ. ಅದಕ್ಕನುಗುಣವಾದ ಕರ್ತವ್ಯಗಳು, ಆ ಕರ್ತವ್ಯ ನಿರ್ವಹಣೆಯ ಫಲವಾಗಿಯೇ ಬರುವ ಹಕ್ಕುಗಳು. ಈ ಮಾದರಿ ಬಹುಶಃ ಗ್ರೀಸ್ ಮತ್ತು ಈಜಿಪ್ಟ್‌ಗಳ ಮೂಲನಿವಾಸಿಗಳಲ್ಲೂ ಇದ್ದಿರಬಹುದು. ಕರ್ತವ್ಯಗಳಿಗನುಗುಣವಾದ ಒಂದು ನೀತಿಸಂಹಿತೆ ಮತ್ತು ಆತ್ಮಸಾಕ್ಷಿಯ ಧರ್ಮಪ್ರಜ್ಞೆ ಜಾಗೃತಗೊಂಡ ಸಮಾಜಗಳಲ್ಲಿ ಅಲಿಖಿತ ರಾಜ್ಯಾಂಗವೊಂದು ಪ್ರಚಲಿತವಾಗಿರುತ್ತಿತ್ತು. ಇವುಗಳ ಪರಿಣಾಮವಾಗಿ ಸಾವಿರಾರು ವರ್ಷಗಳಿಂದ ಅನೂಚಾನವಾಗಿ ಜಗತ್ತಿನಲ್ಲೆಲ್ಲ ರಾಜ, ರಾಜ್ಯ ಮತ್ತು ರಾಜನೀತಿ ಎಂಬ ಸಮಾಜ ಅಂಗೀಕರಿಸಿದ್ದ ಪ್ರಾಮಾಣಿಕ ಮೌಲ್ಯಗಳ ರಾಜ್ಯ ಶಾಸ್ತ್ರ ನಡೆದು ಬರುತ್ತಲಿತ್ತು. ರಾಜಕೀಯ ಕ್ಷೇತ್ರಕ್ಕೂ ಆತ್ಮ ಶ್ರೀನಿಯಮಗಳು ಅನ್ವಯವಾಗುತ್ತಿದ್ದುದರಿಂದ, ಪ್ರಜೆಗಳಲ್ಲೂ ರಾಜರುಗಳಲ್ಲೂ ನೀತಿಶ್ರದ್ಧೆ ಪಸರಿಸಿ ಕರ್ತವ್ಯ ಪಾಲನೆ ಮತ್ತು ಪರಸ್ಪರ ಸಹಕಾರ ಈ ವ್ಯವಸ್ಥೆಯನ್ನು ಸಾವಿರಾರು ವರ್ಷಗಳ ಕಾಲ ನಡೆಸಿಕೊಂಡು ಬಂದವು.

ರಾಜ್ಯ ವ್ಯವಸ್ಥೆಗೆ ನಾಲ್ಕು ಆಧಾರಗಳಿರುತ್ತವೆ. ಶಾಸನಾಧಿಕಾರ, ರಕ್ಷಣಾ ವ್ಯವಸ್ಥೆ, ಆರ್ಥಿಕ ರಚನೆ ಮತ್ತು ಸಂಪದುತ್ಪಾದನೆಯ ದುಡಿಮೆ. ಇವುಗಳ ಪೋಷಕ ಪ್ರವೃತ್ತಿಗಳ ಸಮತೋಲನ ಏರ್ಪಡಿಸುವುದೇ ರಾಜ್ಯಶಾಸ್ತ್ರ. ಕಾಲಾನುಗುಣವಾಗಿ ಅನೇಕ ಪ್ರಯೋಗಗಳು ನಡೆಯುತ್ತಲೇ ಬಂದಿವೆ. ಬೇರೆ ಬೇರೆ ಸ್ವರೂಪಗಳಲ್ಲಿ ಶಾಸನ, ರಕ್ಷಣೆ, ಧನ ಮತ್ತು ದುಡಿಮೆಗಳ ವಲಯಗಳು

ಎಲ್ಲ ರಚನೆಗಳಿಗೂ ಅನಿವಾರ್ಯ ತಳಹದಿ. ಇವುಗಳನ್ನು ಸರ್ವೋದಯ ಸಾಧನೆಗಾಗಿ ಬಳಸಿಕೊಳ್ಳುವ ಪ್ರಯೋಗಗಳು ಭಾರತದ ಜನಜೀವನದಲ್ಲಿ ಆಗಿರುವಷ್ಟು ಮತ್ತೆಲ್ಲಿಯೂ ಕಾಣುವುದಿಲ್ಲ. ರಾಮಾಯಣದಂತಹ ನೀತಿಶಾಸ್ತ್ರ ಸಂಹಿತೆ, ಮಹಾಭಾರತದಂತಹ ಸಮಾಜ ಶಾಸ್ತ್ರ ಇಂದಿಗೂ ಗ್ರಾಮಸ್ತರ ಬಾಳಿನಲ್ಲಿ ಹಾಸುಹೊಕ್ಕಾಗಿ ಒಂದು ಸುಧೃಡ ನೈತಿಕ ನಿಷ್ಠೆಯನ್ನು ನೆಲೆಗೊಳಿಸಿವೆ. ನಮ್ಮ ಸಾಂಸ್ಕೃತಿಕ ಬೇರುಗಳು ಅವುಗಳಿಂದ ಪೋಷಿತವಾಗಿ ಇಂದಿಗೂ ಜೀವಂತವಾಗಿವೆ. ಇವನ್ನೇ ಆಧಾರವಾಗಿಟ್ಟುಕೊಂಡು ಗಾಂಧೀಜಿ ತಮ್ಮ ದೀರ್ಘ ಚಿಂತನೆ ಮತ್ತು ಪ್ರಯೋಗಗಳಿಂದ ಆಧುನಿಕ ಸಂದರ್ಭದಲ್ಲಿ ಮಾನವೀಯ ಮೌಲ್ಯಗಳ ಸ್ವರಾಜ್ಯಶಾಸ್ತ್ರವನ್ನು ಪ್ರತಿಪಾದಿಸಿದ್ದಾರೆ.

ಸ್ವಯಂ ಪ್ರೇರಿತರಾಗಿ ರಾಜನೊಬ್ಬನ ಕೈಗೆ ಸರ್ವಾಧಿಕಾರ ನೀಡಿ, ಅವನು ಒಂದು ಲೋಕಸಮ್ಮತ ಧರ್ಮನಿಷ್ಠೆಗನುಗುಣವಾಗಿ ರಕ್ಷಣೆ, ನ್ಯಾಯವಿತರಣೆ ಮತ್ತು ಶಾಂತ ಸ್ಥಿತಿಗೆ ಹೊಣೆಗಾರನಾಗಿರಬೇಕೆಂಬ ವ್ಯವಸ್ಥೆ ಸರ್ವಸಮಾನಾನ್ಯವಾಗಿ ನಡೆದು ಬಂತು. ಆನುವಂಶಿಕವಾದ ಸಾಮರ್ಥ್ಯಗಳು ಪೋಷಿತವಾಗಿ ವಿವಿಧ ರೀತಿಯ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಗಳು ರೂಪಿತವಾದವು. ಕ್ರಮೇಣ ಎಲ್ಲವನ್ನೂ ನಿಯಂತ್ರಿಸುವ ಅಧಿಕಾರ ಕೇಂದ್ರೀಕೃತವಾಗಿ ರಾಜನ ಕೈಸೇರಿತು. ವಂಶಪಾರಂಪರ್ಯದ ಚೌಕಟ್ಟಿಗೆ ಬದ್ಧವಾಗಿ ಈ ವ್ಯವಸ್ಥೆ ನಡೆದುಬರುತ್ತಿತ್ತು. ಪ್ರಜೆಗಳ ನೇರ ಜವಾಬ್ದಾರಿಗಳು ಶಿಥಿಲಗೊಂಡು ನಿರಂಕುಶ ರಾಜಮನೆತನಗಳ ಊಳಿಗಮಾನ್ಯ ಪದ್ಧತಿ ಭಾರತದಲ್ಲಿ ಹಲವು ಶತಮಾನಗಳಿಂದ ನಡೆದುಬಂದಿದೆ. ಹದಿನಾರನೆಯ ಶತಮಾನದಲ್ಲಿ ಪ್ರಾರಂಭವಾದ ಔದ್ಯೋಗಿಕ ಕ್ರಾಂತಿಯಿಂದಾಗಿ ವಿಶ್ವದಲ್ಲೆಲ್ಲ ಪ್ರಜಾಪ್ರಭುತ್ವ ವ್ಯವಸ್ಥೆ ಕ್ರಮೇಣ ವ್ಯಾಪಿಸತೊಡಗಿತು. ಪ್ರಜೆಗಳು ಚುನಾಯಿಸಿದ ಪ್ರತಿನಿಧಿಗಳ ಪ್ರಭುತ್ವಗಳು ಬೆಳೆಯತೊಡಗಿದವು. ರಾಜತ್ವದ ಆನುವಂಶೀಯ ಹಕ್ಕುಗಳು ಕರಗಿಹೋದವು. ಹೊಸ ಹೊಸ ಪ್ರಜಾಪ್ರಭುತ್ವ ಮಾದರಿಗಳು ಸೃಷ್ಟಿಯಾದವು, ಆಗುತ್ತಿವೆ.

ಈಗಿನ ರಾಜ್ಯಶಕ್ತಿ (ಸ್ಟೇಟ್‌ಪವರ್) ಶಾಸನಾಧಿಕಾರ ಮತ್ತು ಸೈನ್ಯ ಬಲಗಳ ಆಸರೆ ಪಡೆದು ನಿಂತಿದೆ. ಪ್ರಜಾಪ್ರಭುತ್ವ ತತ್ವಗಳು ಅಂಗೀಕೃತವಾಗಿದ್ದರೂ ಪ್ರಭುತ್ವದಲ್ಲಿ ಪ್ರಜೆಗಳ ಪಾಲುಗಾರಿಕೆ ಅತ್ಯಲ್ಪ. ಪ್ರತಿನಿಧಿಗಳಾದವರು ಸೀಮಿತಕಾಲಕ್ಕೆ ಅಧಿಕಾರವಹಿಸಿದರೂ ಮತ್ತೆ ಮತ್ತೆ ಹಿಂದಿನ ಊಳಿಗಮಾನ್ಯ ಪದ್ಧತಿಯ (ಫ್ಯೂಡಲ್ ಸಿಸ್ಟಮ್) ಜಾಡನ್ನೇ

ಹಿಡಿದು ಸಾಗುತ್ತಾರೆ. ಬುನಾದಿಯ ಸ್ತರದಲ್ಲಿ ಪ್ರಜೆಗಳಲ್ಲಿನ ಅಭಿಕ್ರಮಶಕ್ತಿಗೆ ಅವಕಾಶಗಳನ್ನು ನೀಡುವುದೇ ಇಲ್ಲ. ಪಾಶ್ಚಾತ್ಯ ದೇಶಗಳಲ್ಲಿನ ಪಕ್ಷ ಪ್ರಧಾನ ಸಂಸದೀಯ ಪ್ರಭುತ್ವವೊಂದೇ ಈಗ ಮಾದರಿ ಎನಿಸಿದೆ. ಪಕ್ಷಗಳ ರಚನೆ, ಮೂಲ ಆರ್ಥಿಕ ಸಾಮಾಜಿಕ ಸಿದ್ಧಾಂತಗಳು, ವ್ಯಕ್ತಿಪ್ರಭಾವ, ಧನಬಲ, ಜಾತಿಬೆಂಬಲ, ಹಿಂಸಾಶಕ್ತಿ ಇವುಗಳು ರಾಜ್ಯಾಧಿಕಾರ ಸ್ಪರ್ಧೆಯೆನಿಸಿರುವ ಚುನಾವಣೆಗಳಲ್ಲಿ ಪ್ರಬಲ ಪಾತ್ರ ವಹಿಸುತ್ತವೆ. ಎಲ್ಲವೂ ಮೇಲ್ವರ್ಗಗಳ ಗುಂಪುಗಾರಿಕೆಯ ಅಧೀನವಾಗಿಯೇ ನಡೆಯುತ್ತವೆ. ಅಹಿಂಸಾತ್ಮಕ ಪ್ರತಿಭಟನಾ ಶಕ್ತಿಯನ್ನು ಮೈಗೂಡಿಸಿಕೊಂಡಿರುವ ಜನಸಾಮಾನ್ಯರ ಆತ್ಮವಿಶ್ವಾಸದ ಭೂಮಿಕೆಯ ಮೇಲೆ ನಿಲ್ಲುವ ನಿಜವಾದ ಪ್ರಜಾಪ್ರಭುತ್ವ ಅಥವಾ 'ಸ್ವರಾಜ್ಯ' ಇನ್ನೂ ವಿಕಾಸಗೊಂಡಿಲ್ಲ. ಯುದ್ಧ, ಹಿಂಸೆ, ಬಲಾತ್ಕಾರದ ಶಾಸನಗಳು, ಅಧಿಕಾರ ಕೇಂದ್ರೀಕರಣ, ಸಂಪತ್ತಿನ ಕೇಂದ್ರೀಕರಣ, ವ್ಯಕ್ತಿಪೂಜೆ, ಮತಾಂಧತೆ ಇವುಗಳ ರಾಕ್ಷಸ ಹಿಡಿತ ತಾನೇ ತಾನಾಗಿ ವಿಜೃಂಭಿಸುತ್ತಿವೆ. ನೈತಿಕ ಶಾಸನದ, ಮಾನವೀಯ ಮೌಲ್ಯಗಳ ಸರ್ವಸಮಾನತೆಯ ರಾಜ್ಯ ಇನ್ನೂ ವಿಕಾಸಗೊಳ್ಳಬೇಕಾಗಿದೆ. ಗಾಂಧೀಜಿಯ ಚಿಂತನೆ ಮತ್ತು ಪ್ರಯೋಗಗಳು ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಕಾಲಕ್ಕೆ ಹೊಚ್ಚಹೊಸ 'ಪೂರ್ಣಸ್ವರಾಜ್ಯ'ದ ಈ ಕಲ್ಪನೆಯನ್ನು ಮೂಡಿಸಿದ್ದವು. ರಾಜಕೀಯ ಸ್ವಾತಂತ್ರ್ಯವನ್ನಷ್ಟೇ ಗಳಿಸಿಕೊಂಡ ಭಾರತ ಈಗ ಗಾಂಧೀ ವಿಚಾರ ಮಾರ್ಗದಲ್ಲಿ ನಿಮ್ಮ ರಾಜನೀತಿ ಕ್ಷೇತ್ರವನ್ನು ಮುಂದಿನ ಹೆಜ್ಜೆಗೆ ಕೊಂಡೊಯ್ಯುವುದರಲ್ಲಿ ವಿಫಲವಾಗಿದೆ.

ಲೋಕಮಾನ್ಯ ತಿಲಕರು ಆಧ್ಯಾತ್ಮಿಕ ಸ್ಫೂರ್ತಿಯಿಂದ ಈ ನಾಡಿನ ವಿಕಾಸ ಕ್ರಮವನ್ನು ಗುರ್ತಿಸಿ 'ಸ್ವರಾಜ್ಯ ನಮ್ಮ ಜನ್ಮಸಿದ್ಧ ಹಕ್ಕು, ನಾವದನ್ನು ಪಡೆದೇ ತೀರುತ್ತೇವೆ' ಎಂದು ಘೋಷಿಸಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ನಾಂದಿ ಹಾಡಿದರು. ಅದೇ ನೀಟ್ಟಿನಲ್ಲಿ ಮುಂದುವರಿದು ಗಾಂಧೀಜಿ 'ಸ್ವರಾಜ್ಯ' ಎಂಬ ಆದರ್ಶಕ್ಕೆ ಅತ್ಯಾಧುನಿಕ ಸಂದರ್ಭದಲ್ಲಿ ಸತ್ಯ ಮತ್ತು ಅಹಿಂಸಾನಿಷ್ಠೆಯ ಪ್ರಜಾಪ್ರಭುತ್ವ ತತ್ವಗಳನ್ನು ಅಳವಡಿಸಿಕೊಟ್ಟಿದ್ದಾರೆ. ತಮ್ಮ ಅದಮ್ಯ ಶ್ರದ್ಧೆಯನ್ನು ವ್ಯಕ್ತಮಾಡುತ್ತಾ ಅವರು ಹೀಗೆ ನುಡಿದಿದ್ದಾರೆ:

"Science of war leads one to dictatorship pure and simple. Science of nonviolence can alone lead one to pure democracy".

(ಸಮರ ವಿಜ್ಞಾನ ಅನಿವಾರ್ಯವಾಗಿ ಸರ್ವಾಧಿಕಾರೀ ಪ್ರಭುತ್ವಕ್ಕೆ ದಾರಿ ಮಾಡಿಕೊಡುತ್ತದೆ. ಅಹಿಂಸಾ ವಿಜ್ಞಾನ ಮಾತ್ರವೇ ನಿಜವಾದ ನಿರ್ಮಲವಾದ ಪ್ರಜಾರಾಜ್ಯ ನಿರ್ಮಾಣ ಮಾಡಬಲ್ಲದು) (ಹರಿಜನ, 15-10-1938)

ನಾಳಿನ ಜಗತ್ತು ಯುದ್ಧರಹಿತವಾದ ಶೋಷಣರಹಿತವಾದ ವಿಶ್ವಶಾಂತಿ ಸಾಧಕವಾದ ಮಾನವೀಯ ಮೌಲ್ಯಗಳ ರಾಜ್ಯಶಾಸ್ತ್ರವನ್ನು ರೂಪಿಸಿಕೊಳ್ಳುವುದು ಈಗ ಅನಿವಾರ್ಯವೆನಿಸಿದೆ. ಈ ಸಾಹಸಪೂರ್ಣ ಉದ್ಯಮದಲ್ಲಿ ಗಾಂಧೀಜಿ ತೋರಿಸಿದ ದಾರಿ ಅತ್ಯಮೂಲ್ಯವೆಂದು ಜಗತ್ತಿನ ಅನೇಕ ಚಿಂತನಶೀಲರು ಅಂಗೀಕರಿಸುತ್ತಿದ್ದಾರೆ. "ಈಗ ಮಾನವ ಇತಿಹಾಸದಲ್ಲಿ ವಿಧ್ವಂಸಕ ಪ್ರವೃತ್ತಿಗಳನ್ನು ಸಂಪೂರ್ಣವಾಗಿ ತ್ಯಜಿಸುವ ಕಾಲ ಸನ್ನಿಹಿತವಾಗಿದೆ. ಕೇವಲ ಯುದ್ಧವೆಂಬ ಸಂಸ್ಥಾಬದ್ಧ ವ್ಯವಸ್ಥೆಯಲ್ಲಿ ಮಾತ್ರವೇ ಅಲ್ಲ, ಮಾನವ ಬಾಂಧವ್ಯಗಳ ಎಲ್ಲ ವಲಯಗಳಲ್ಲೂ ಅದು ಅತ್ಯಗತ್ಯವೆನಿಸಿದೆ. ಈ ನಿಟ್ಟಿನಲ್ಲಿ ಮಹಾತ್ಮ ಗಾಂಧಿಯವರ ಪ್ರಯೋಗ ಮತ್ತು ಸಾಧನೆಗಳು ಜಗತ್ತಿಗೆ ದಾರಿದೀಪವಾಗಿವೆ" ಎಂದಿದ್ದಾರೆ. ವಿಖ್ಯಾತ ಇತಿಹಾಸತಜ್ಞ ಆರ್ನಾಲ್ಡ್ ಟಾಯನ್ ಬಿ (ಮಹಾತ್ಮ-ಜನ್ಮಶತಾಬ್ದಿ ಗ್ರಂಥ)

ವಿಶ್ವಮಾನ್ಯ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೈನ್ "ಅತ್ಯಂತ ಶ್ರೇಷ್ಠ ತತ್ವವೇತ್ತರನ್ನೂ, ವಿಜ್ಞಾನಿಗಳನ್ನೂ, ರಾಜ್ಯಶಾಸ್ತ್ರತಜ್ಞರನ್ನೂ ಪಡೆದಿದ್ದರೂ, ನಮ್ಮ ಕಾಲದ ರಾಜ್ಯಶಾಸ್ತ್ರ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳ ಪರಿಹಾರ ಕಾರ್ಯದಲ್ಲಿ ವಿಫಲವಾಗಿದೆ. ವಿಶ್ವಶಾಂತಿ ಮತ್ತು ಅಂತರ್ರಾಷ್ಟ್ರೀಯ ಸೌಹಾರ್ದಯುತ ಸಹಕಾರಕ್ಕೆ ಬುನಾದಿಯಾಗುವ ರಾಜಕೀಯ ಮತ್ತು ಆರ್ಥಿಕ ರಚನೆಗಳನ್ನು ರೂಪಿಸಿಕೊಳ್ಳಲು ಅಸಮರ್ಥರಾಗಿದ್ದೇವೆ. ನಮ್ಮ ಕಾಲದ ಎಲ್ಲ ರಾಜನೀತಿಜ್ಞರಲ್ಲಿ ಮಹಾತ್ಮ ಗಾಂಧಿಯವರ ವಿಚಾರಗಳೇ ಅತ್ಯಂತ ಪ್ರಜ್ಞಾಪೂರ್ವಕ ನಿಲುವು ಎನಿಸುತ್ತದೆ. ಅವರು ಸೂಚಿಸಿರುವ ರೀತಿಯಲ್ಲಿ ಅವರ ನಿಷ್ಠೆಗಳನ್ನಂಗೀಕರಿಸಿ ನಾವೆಲ್ಲ ಪ್ರಾಮಾಣಿಕ ಪ್ರಯತ್ನ ಮಾಡಬೇಕು" ಎಂದಿದ್ದಾರೆ.

(ಗಾಂಧೀಜಿ ಮತ್ತು ಐನ್‌ಸ್ಟೀನ್ ಗ್ರಂಥ)

ಮಾನವ ಸಾಪೇಕ್ಷವಾದ ರಾಜ್ಯಶಾಸ್ತ್ರ ತನ್ನ ಮೂಲಭೂತ ಮೌಲ್ಯಗಳನ್ನು ಸತತವಾಗಿ ಶೋಧಿಸುತ್ತಾ, ತನ್ನ ಮುಖ್ಯ ಉದ್ದೇಶವಾದ 'ಕಟ್ಟಕಡೆಯವರಿಗೆ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ನ್ಯಾಯ'ವನ್ನು

ದೊರಕಿಸಿಕೊಡಬೇಕಾದುದು ಇಂದಿನ ಅಗತ್ಯ. ಯಾವುದೇ ಒಂದು ಪದ್ಧತಿ ಸಾರ್ವಕಾಲಿಕವಾಗಿ ನಿಲ್ಲುವುದು ಸಾಧ್ಯವಿಲ್ಲ. ಸಾಮಾನ್ಯ ಜನ ತತ್ವಜ್ಞಾನಿಗಳೂ ಅಲ್ಲ, ವಾದನಿಷ್ಠರೂ ಅಲ್ಲ. ಯಾವುದೇ ಒಂದು ವಾದದ ಸಿದ್ಧಾಂತಗಳು ಬೇರೆ ಬೇರೆ ಪರಿಸ್ಥಿತಿಗಳಿಗೆ ಅನ್ವಯವಾಗಲಾರವು. ಒಂದು ನಿರ್ದೋಷ ಪದ್ಧತಿಯ ಲಕ್ಷಣಗಳನ್ನು ಕುರಿತು ಆಚಾರ್ಯ ವಿನೋಬಾ ತಮ್ಮ 'ಸ್ವರಾಜ್ಯ ಶಾಸ್ತ್ರ' ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ:

(1) ಸಮರ್ಥರ ಸಾಮರ್ಥ್ಯ ಪ್ರಕೃತಿಯ ಕೊಡುಗೆಯಾದುದರಿಂದ ಜನಸೇವೆಗಾಗಿಯೇ ಮೀಸಲಾಗಿರಬೇಕು. ಕೇವಲ ಸ್ವಾರ್ಥಸಾಧನೆಗೆ ಬಳಸತಕ್ಕದ್ದಲ್ಲ.

(2) ಜನತೆ ತನ್ನ ಮೂಲ ಅವಶ್ಯಕತೆಗಳಲ್ಲಿ ಸ್ವಾವಲಂಬಿಯೂ, ಸಾಮಾಜಿಕವಾಗಿ ಪರಸ್ಪರ ಸಹಕಾರಿಯೂ ಆಗಿದ್ದು, ವಿಶ್ವಕುಟುಂಬ ಭಾವನೆಯಿಂದ ಬದುಕಲು ಕಲಿಯುವಂತಿರಬೇಕು.

(3) ರಾಜ್ಯ ಶಕ್ತಿಯನ್ನು ನಿಯಂತ್ರಣಗೊಳಿಸಲು ಅಹಿಂಸಾತ್ಮಕ ಅಸಹಕಾರದ ನೈತಿಕಶಕ್ತಿ ಜನತೆಯಲ್ಲಿದ್ದು ರಚನಾತ್ಮಕವಾದ ದಿನನಿತ್ಯದ ಕಾರ್ಯಗಳಲ್ಲಿ ಸಹಕಾರ ನೀಡುವ ಅರಿವು ಜೀವಂತವಾಗಿರಬೇಕು.

(4) ಪ್ರತಿ ಪ್ರಜೆಯ ಸಮಾಜೋಪಯುಕ್ತ ಪರಿಶ್ರಮದ ಬೆಲೆಯೂ ನೈತಿಕವಾಗಿ ಆರ್ಥಿಕವಾಗಿ, ಸಾಮಾಜಿಕವಾಗಿ ಏಕಪ್ರಕಾರವಾಗಿದ್ದು ಸರ್ವಸಮಾನ ಗೌರವಕ್ಕೆ ಪಾತ್ರವಾಗುವಂತಿರಬೇಕು.

ಸೇವಾಭಾವನೆ, ಸರಳ ಜೀವನ, ಸ್ವಾವಲಂಬನೆ, ಸತ್ಯಾಗ್ರಹಶಕ್ತಿ, ಸಾಮಾಜಿಕ ಸಮಾನತೆ ಮತ್ತು ಆಧ್ಯಾತ್ಮಿಕತೆ – ಇವು ಗಾಂಧೀ ಪ್ರಣೀತ ಸ್ವರಾಜ್ಯದ ತಳಹದಿ. ಆಯಾ ಕಾಲದ ಜಾನಪದ ತಿಳುವಳಿಕೆಗಳಿಗನುಗುಣವಾಗಿ ಆಡಳಿತ ಪದ್ಧತಿಗಳೂ, ಸಾಂಸ್ಕೃತಿಕ ಸಂಸ್ಥೆಗಳೂ, ಸಾಮಾಜಿಕ ವ್ಯವಸ್ಥೆಗಳೂ ಕಡೆದು ನಿಲ್ಲುತ್ತವೆ. ಆದರ್ಶದ ಕಡೆಗೆ ಅವು ಹೆಜ್ಜೆಯಿಡುತ್ತಿರಬೇಕು. ಆದರೆ ಆದರ್ಶ ಎಲ್ಲ ಕಾಲಕ್ಕೂ ಸಾಧನೆಯ ಕ್ಷಿತಿಜದಾಚೆಗೆ ನಿಂತು ಆಹ್ವಾನಿಸುತ್ತಿರುತ್ತದೆ. ಪ್ರಾಮಾಣಿಕ ಪ್ರಯತ್ನವಿರಬೇಕು. ನಿರಾಶೆಯಿಂದ ಹಿಮ್ಮೆಟ್ಟಬಾರದು ಎಂದರು ಗಾಂಧೀಜಿ. ಪರಿಸ್ಥಿತಿ ಸಾಪೇಕ್ಷವಾಗಿಯೇ ರಾಜ್ಯಶಾಸ್ತ್ರ ರೂಪಗೊಳ್ಳುತ್ತದೆ.

ಸ್ವರಾಜ್ಯ ಎಂದರೆ ಅದು ಒಂದು ವಿಶಿಷ್ಟ ಜೀವನವಿಧಾನ, ಒಂದು ಮೌಲ್ಯಸಂಹಿತೆಯ ಅಂಗೀಕಾರ. ಕೇವಲ ರಾಜಕೀಯ ಬದಲಾವಣೆ ಅಲ್ಲ,

ನೈತಿಕ ನಿಷ್ಠೆಯ, ಸುಸಂಘಟಿತ ನಿತ್ಯಜಾಗೃತ ಮತ್ತು ಪರಿಣಾಮಕಾರೀ ಜನಶಕ್ತಿ ನಿರ್ಮಾಣ, ಇವು ಗಾಂಧೀ ಮಾರ್ಗದ ಪರಮ ಗುರಿಯಾದ ಸ್ವರಾಜ್ಯ. ತಮ್ಮ ಜೀವನದುದ್ದಕ್ಕೂ ಈ ಗುರಿಸಾಧನೆಗಾಗಿ ಶ್ರಮಿಸಿ, ತಮ್ಮ ಚಿಂತನ ಮತ್ತು ಪ್ರಯೋಗಗಳ ಚಳುವಳಿಯನ್ನು ರಾಷ್ಟ್ರಕ್ಕೆ ಧಾರೆಯೆರೆದಿದ್ದಾರೆ ಗಾಂಧೀಜಿ. ತಮ್ಮ ಪ್ರಮುಖ ಗುರಿಯನ್ನು ಕುರಿತು ಹೀಗೆ ಹೇಳಿದ್ದಾರೆ:

"Holding the view that, without the recognition of nonviolence on a national scale, there is no such thing as a constitutional democratic government, I devote my energy to the propogation of non violence as the law of our life, individual, social, political, national and international... If I know the success of my experiments, I know also my failures. But the successes are enough to fill me with undying hope"

(Harijan 11-2-1993)

'ರಾಷ್ಟ್ರೀಯ ಸ್ತರದಲ್ಲಿ ಅಹಿಂಸಾ ಶಕ್ತಿಯನ್ನು ಅಂಗೀಕರಿಸದಿದ್ದಲ್ಲಿ ಒಂದು ರಾಜ್ಯಾಂಗಬದ್ಧ ಪ್ರಜಾಸತ್ತಾತ್ಮಕ ಸರ್ಕಾರ ಇರುವುದೇ ಇಲ್ಲ ಎಂಬುದು ನನ್ನ ನಂಬಿಕೆ. ಆದ್ದರಿಂದ ಅಹಿಂಸೆಯೇ ಜೀವನದ ನಿಯಮ ಎಂಬ ಸತ್ಯವನ್ನು ಪ್ರಸಾರ ಮಾಡಲು ನನ್ನ ಎಲ್ಲ ಶಕ್ತಿ ಸಾಮರ್ಥ್ಯಗಳನ್ನು ವಿನಿಯೋಗಿಸುತ್ತೇನೆ. ವ್ಯಕ್ತಿಗತವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ರಾಷ್ಟ್ರೀಯವಾಗಿ ಮತ್ತು ಅಂತರ್ರಾಷ್ಟ್ರೀಯವಾಗಿ ಅದೇ ಸತ್ಯ. ನನ್ನ ಪ್ರಯೋಗಗಳ ಯಶಸ್ಸನ್ನು ನಾನು ಅರಿತಿರುವಂತೆಯೇ ನನ್ನ ವಿಫಲತೆಗಳನ್ನೂ ತಿಳಿದಿದ್ದೇನೆ. ಆದರೆ ಆಗಿರುವ ಯಶಸ್ವೀ ಪ್ರಯೋಗಗಳು ನನ್ನಲ್ಲಿ ಅಚಲವಾದ ಆಶಾಭಾವನೆಯನ್ನು ತುಂಬುವಷ್ಟು ಸಮೃದ್ಧವಾಗಿವೆ".

ಕೆ. ಎಸ್. ನಾರಾಯಣಸ್ವಾಮಿ

# ಪರಿವಿಡಿ

# ನನ್ನ ಕನಸಿನ ಸ್ವರಾಜ್ಯ
# SWARAJ OF MY DREAMS

## I

By Swaraj I mean the governance of India by the consent of the people as ascertained by the largest number of the adult population, male or female, native born or domiciled, who have contributed by manual labour to the service of the state and who have taken the trouble of having registered their name as voters...

Real Swaraj will come not by the acquisition of authority by a few but by the acquisition by all to resist authority when it is abused. In other words Swaraj is to be obtained by educating the masses to a sense of their capacity to regulate and control authority...

ಭಾರತದಲ್ಲಿ ಹುಟ್ಟಿದ ಅಥವಾ ಇಲ್ಲಿನ ದೇಶವಾಸಿಗಳಾಗಿರುವ ಅತ್ಯಧಿಕ ಸಂಖ್ಯೆಯ, ವಯಸ್ಕ ಪುರುಷರು ಮತ್ತು ಮಹಿಳೆಯರು ಸಮ್ಮತಿ ನೀಡುವಂತಹ ಆಡಳಿತ ರಚನೆ ಭಾರತದ ಸರ್ಕಾರವನ್ನು ನಡೆಸುವುದೇ ನನ್ನ ಅರ್ಥದಲ್ಲಿ ಸ್ವರಾಜ್ಯ. ಅಂಥ ಎಲ್ಲ ಭಾರತೀಯರು ರಾಷ್ಟ್ರ ಸೇವೆಯಲ್ಲಿ ದೈಹಿಕ ಶ್ರಮ ನೀಡುವಂತಹವರಾಗಿದ್ದು ಪ್ರಜೆಗಳಾಗಿ ಮತದಾನದ ಹಕ್ಕು ಪಡೆಯಲು ಹೆಸರುಗಳನ್ನು ನೋಂದಾಯಿಸಿಕೊಳ್ಳುವ ಶ್ರಮ ವಹಿಸುವಂತಹವರಾಗಿರಬೇಕು.

ಕೆಲವು ಜನ ರಾಜ್ಯಾಧಿಕಾರವನ್ನು ಪಡೆಯುವುದರಿಂದ ಮಾತ್ರವೇ ಸ್ವರಾಜ್ಯ ಲಭಿಸಲಾರದು. ಪಡೆದ ಅಧಿಕಾರವನ್ನು ದುರುಪಯೋಗಪಡಿಸಿಕೊಂಡಾಗ ವಿರೋಧಿಸಿ ನಿಲ್ಲುವ ಸಾಮರ್ಥ್ಯವನ್ನು ಎಲ್ಲರೂ ಪಡೆದುಕೊಂಡಾಗ

ಮಾತ್ರವೇ ಅದು ನಿಜವಾದ ಸ್ವರಾಜ್ಯ. ಅಂದರೆ ಅಧಿಕಾರಶಾಹಿಯನ್ನು ನಿಯಂತ್ರಿಸಿ ನಿರ್ದೇಶಿಸುವಂತಹ ಶಕ್ತಿ ಇದೆ ಎಂಬ ರಾಜಕೀಯ ಪ್ರಜ್ಞೆಯನ್ನು ಎಲ್ಲ ಪ್ರಜೆಗಳೂ ಪಡೆಯುವಂತೆ ಶಿಕ್ಷಣ ನೀಡಿದಾಗ ಮಾತ್ರ ಸ್ವರಾಜ್ಯ ಸಿದ್ಧಿಸೀತು.

### II

Swaraj is complete independence of alien control and complete economic independence. So at one end you have political independence, at the other the economic. It has two other ends. One of them is moral and social, the correspondinding end is dharma, i.e., religion in the highest sense of the term... Let us call this square of Swaraj which will be out of shape if any one of its angles is untrue.

ಸ್ವರಾಜ್ಯ ಅಂದರೆ ವಿದೇಶೀ ನಿಯಂತ್ರಣದಿಂದ ಪೂರ್ಣ ಸ್ವಾತಂತ್ರ್ಯ ಮತ್ತು ಸಂಪೂರ್ಣ ಆರ್ಥಿಕ ಸ್ವಾತಂತ್ರ್ಯ. ರಾಜಕೀಯ ಸ್ವಾತಂತ್ರ್ಯ ಒಂದು ಕೊನೆ, ಮತ್ತೊಂದು ಆರ್ಥಿಕ ಸ್ವಾತಂತ್ರ್ಯ. ಅದಕ್ಕೆ ಮತ್ತೆರಡು ಕೋನಗಳುಂಟು. ಒಂದು ನೈತಿಕ ಮತ್ತು ಸಾಮಾಜಿಕ, ಅದಕ್ಕನುಗುಣವಾದ ಧರ್ಮ ಮತ್ತೊಂದು. ಅತ್ಯಂತ ಪೂರ್ಣಾರ್ಥದಲ್ಲಿ ಅರಿಯಬೇಕಾದ ಧರ್ಮ ಅದು. ಇದನ್ನು ಸ್ವರಾಜ್ಯದ ಚಚ್ಚೌಕ ಎಂದು ಕರೆಯೋಣ. ಯಾವ ಒಂದು ಕೋನ ಮುಕ್ಕಾದರೂ ಅದರ ಸ್ವರೂಪವೇ ನಾಶವಾದೀತು.

### III

The Swaraj of our dreams recognizes no race or religious distinctions. Nor is it be the monopoly of the lettered person nor yet of moneyed men. Swaraj is to be for all, including the former but emphatically including the maimed, the blind, the starving toiling millions.

ನಮ್ಮ ಕನಸಿನ ಸ್ವರಾಜ್ಯದಲ್ಲಿ ಜನಾಂಗ ಭೇದವಾಗಲೀ ಧಾರ್ಮಿಕ ಪ್ರತ್ಯೇಕತೆಯಾಗಲೀ ಗೌರವಿಸಲ್ಪಡುವುದಿಲ್ಲ. ಹಾಗೆಯೇ ಕೇವಲ ಅಕ್ಷರಸ್ಥರಾದವರ ಗುತ್ತಿಗೆಯ ರಾಷ್ಟ್ರವಾಗಿಯಾಗಲಿ ಶ್ರೀಮಂತರ ರಾಜ್ಯವಾಗಿಯಾಗಲೀ ಆಗಲಾರದು. ಅದು ಸರ್ವರ ರಾಜ್ಯ ಎಂದೇ ರೂಪಗೊಂಡೀತು. ಅದರಲ್ಲಿ ನಾಡಿನ ರೈತರೂ ಸೇರಿರಬೇಕು. ಹಾಗೆಯೇ ಅಂಗವಿಕಲರೂ, ಕುರುಡರೂ ಮತ್ತು ಮೂಕ ಕೋಟಿಗಳಾಗಿ ಹಸಿದು ದುಡಿಯುತ್ತಿರುವವರೂ ಅತ್ಯಗತ್ಯವಾಗಿ ಪರಿಗಣಿತವಾಗಲೇಬೇಕು.

The unit of the society should be a village or call it a small and manageable group of people who would in the ideal, be self sufficient in the matter of their vital needs and bound together in bonds of mutual cooperation and interdependence.

ಮಾನವ ಸಮಾಜದ ಮೂಲ ಘಟಕ ಎಂದರೆ ಗ್ರಾಮ. ಅಥವಾ ಸಣ್ಣದಾಗಿರುವ, ವ್ಯವಹಾರ ನಿಯಂತ್ರಣಕ್ಕೆ ಒಳಗಾಗಬಲ್ಲ ಮಾನವ ಸಮೂಹ. ಆದರ್ಶ ಸ್ಥಿತಿಯಲ್ಲಿ ಅವರು ತಮ್ಮ ಜೀವನಾವಶ್ಯಕ ಮುಖ್ಯ ವಸ್ತುಗಳ ಬಗ್ಗೆ ಸ್ವಪರಿಪೂರ್ಣರಾಗಿರುತ್ತಾರೆ. ಪರಸ್ಪರ ಸಹಕಾರ ಮತ್ತು ಪರಸ್ಪರಾವಲಂಬನೆಗಳ ಮೂಲಕ ಬಾಂಧವ್ಯ ಬೆಳೆಸಿ ಒಟ್ಟಾಗಿ ಬಾಳುತ್ತಾರೆ.

## IV

In this structure (of Swaraj) composed of innumerable villages, there will be over widening, never ascending circles. Life will be a pyramid with the apex sustained by the bottom. But it will be an oceanic circle whose centre will be the individual, always ready to perish for the village, the latter ready to perish for the circle of villages, till at last the whole becomes one life composed of individuals, never aggressive in their arrogance but ever humble, sharing the majesty of the oceanic circle of which

they are integral units... Therefore the outermost circle (the nation) will not weild power to crush the inner circles but give strength to all within and derive its own from the centre (the individual citizen)....... we are all leaves of a majestic tree whose trunk cannot be shaken off its roots which are deep down in the boweld of this earth. The mightiest of winds cannot shake it.

ಅಸಂಖ್ಯಾತ ಗ್ರಾಮಗಳನ್ನೊಳಗೊಳ್ಳುವ ಈ ಸ್ವರಾಜ್ಯ ರಚನೆಯಲ್ಲಿ ಸತತವಾಗಿ ವಿಸ್ತಾರವಾಗುತ್ತಾ ಹೋಗುವ ವರ್ತುಲಗಳಿರುತ್ತವೆ. ಒಂದರ ಮೇಲೊಂದು ನಿಲ್ಲುವ ರಚನೆ ಇರಲಾಗದು. ಇಡೀ ಜೀವನ ಪಿರಮಿಡ್ಡಿನಂತೆ ಕೆಳಗಿನ ಬುಡದ ಮೇಲೆ ನಿಲ್ಲುವ ಶಿಖರದಂತಿರುವುದಿಲ್ಲ. ವಿಶಾಲ ಸಾಗರದಲ್ಲಿನ ಏಕಕೇಂದ್ರಿತ ಸಮಾನಾಂತರ ವರ್ತುಲಗಳಂತೆ ಇರುತ್ತದೆ. ಮಾನವ ವ್ಯಕ್ತಿಯೇ ಅದರ ಕೇಂದ್ರ ಬಿಂದು. ಗ್ರಾಮದ ಒಳಿತಿಗಾಗಿ ವ್ಯಕ್ತಿ, ಗ್ರಾಮ ಸಮೂಹಗಳಿಗಾಗಿ ಗ್ರಾಮ, ಕೊನೆಗೆ ಸಮಗ್ರ ಸಮುದಾಯಕ್ಕಾಗಿ ಗ್ರಾಮ ಸಮೂಹಗಳು ಬಲಿದಾನ ಮಾಡಲು ಸದಾ ಸಿದ್ಧವಾಗಿರುತ್ತಾ ಒಂದು ಪೂರ್ಣಚಕ್ರ ರಚಿತವಾಗಿ ನಿಲ್ಲುತ್ತದೆ. ಮಾನವ ವ್ಯಕ್ತಿಗಳಿಂದ ಆವೃತವಾಗಿರುವ ಈ ಸಮೂಹದಲ್ಲಿ ಪರಸ್ಪರ ಆಕ್ರಮಣಕಾರಕ ಅಹಂಕಾರ ವರ್ಜಿಸಿ, ವಿನೀತರಾಗಿ ಬದುಕುತ್ತಾ ಈ ಮಹಾಸಾಗರಸದೃಶ ವರ್ತುಲಗಳ ವೈಭವದಲ್ಲಿ ಕೇಂದ್ರ ಬಿಂದುವಾಗಿ ಪಾಲ್ಗೊಳ್ಳುತ್ತಾರೆ. ಆದ್ದರಿಂದ ರಾಷ್ಟ್ರವಿಸ್ತಾರದ ಹೊರವಲಯದ ವರ್ತುಲ ತನ್ನೊಳಗಿನ ಇತರ ವರ್ತುಲಗಳನ್ನು ತುಳಿದು ದಮನ ಮಾಡುವಂತಹ ಅಧಿಕಾರ ಹೊಂದಿರುವುದಿಲ್ಲ. ಕೆಳಗಿನ ವರ್ತುಲಗಳಿಗೆ ಶಕ್ತಿ ನೀಡಿ ಪೋಷಿಸುತ್ತಾ ಅವುಗಳ ಕೇಂದ್ರ ಬಿಂದುವೆನಿಸಿದ ರಾಷ್ಟ್ರಕರೆಂಬ ವ್ಯಕ್ತಿಸಮೂಹದಿಂದ ತಾನು ತನ್ನ ಶಕ್ತಿಯನ್ನು ಪಡೆದಿರುತ್ತದೆ. ಒಂದು ಘನಗಾಂಭೀರ್ಯದ ಮಹಾವೃಕ್ಷದ ಅಸಂಖ್ಯಾತ ಎಲೆಗಳಂತೆ ಪ್ರಜೆಗಳು ಕಂಗೊಳಿಸುತ್ತಾರೆ. ಭೂಮಿಯ ಆಳಕ್ಕೆ ಹೋಗಿರುವ ಬೇರುಗಳ ಮೇಲೆ ನಿಂತ ಮಹಾವೃಕ್ಷದ ಪ್ರಬಲ ಕಾಂಡ ಯಾವ ರಾಕ್ಷಸ ಬಿರುಗಾಳಿಗೂ ಮಣಿಯದೇ ದೃಢವಾಗಿ ನಿಂತಿರುತ್ತದೆ.

## V

It has been said that Indian Swaraj will be the rule of the majority community, the Hindus. There could not be a greater mistake than that. If it were to be true I for one would refuse to call it swaraj and would fight it with all the strength at my command, for to me Hind Swaraj is the rule of all people, it is the rule of equal justice.

ಭಾರತೀಯ ಸ್ವರಾಜ್ಯ ಎಂದರೆ ಇಲ್ಲಿನ ಬಹುಸಂಖ್ಯಾತ ಸಮುದಾಯವಾಗಿರುವ ಹಿಂದೂಗಳ ಆಡಳಿತ ಎಂದು ಹೇಳಲಾಗುತ್ತಿದೆ. ಇದಕ್ಕಿಂತ ದೊಡ್ಡ ತಪ್ಪು ಭಾವನೆ ಇರಲಾರದು. ಹಿಂದೂ ಮತೀಯರ ರಾಜ್ಯ ಎಂದು ಆಗುವುದು ನಿಜವಾದರೆ ಅದನ್ನು ನಾನು ಸ್ವರಾಜ್ಯ ಎಂದು ಕರೆಯಲು ನಿರಾಕರಿಸುತ್ತೇನೆ. ನನ್ನ ಬಲವನ್ನೆಲ್ಲಾ ಬಳಸಿಕೊಂಡು ಈ ಸಂಭವನೀಯ ಸ್ಥಿತಿಯನ್ನು ಪ್ರತಿಭಟಿಸಿ ಹೋರಾಡುತ್ತೇನೆ. ನನ್ನ ಮಟ್ಟಿಗೆ ಹೇಳುವುದಾದರೆ 'ಹಿಂದ್ ಸ್ವರಾಜ್ಯ' ಎಂದರೆ ಸರ್ವಜನತೆಯ ಪ್ರಭುತ್ವ ಅದು ಸಮಾನ ನ್ಯಾಯ ನೀಡುವ ರಾಜ್ಯಾಡಳಿತ.

## VI

My notion of 'Poorna Swaraj' is not isolated independence but healthy and dignified independence. My nationalism fierce though it is, is not exclusive, is not designed to harm any nation or individual. Legal maxims are not so legal as they are moral. I believe in the eternal truth of the saying "use thy own property so as not to injure thy neighbour's".

ಪೂರ್ಣ ಸ್ವರಾಜ್ಯ ಎಂದು ನಾನು ಭಾವಿಸಿರುವುದು ಪ್ರತ್ಯೇಕತೆಯ ಏಕಾಂಗಿ ಸ್ವಾತಂತ್ರ್ಯವಲ್ಲ. ಒಂದು ಆರೋಗ್ಯಕರ ಗಂಭೀರಪೂರ್ಣವಾದ ಸ್ವಾತಂತ್ರ್ಯ. ನನ್ನ ರಾಷ್ಟ್ರೀಯತೆ ಎಷ್ಟೇ ತೀಕ್ಷ್ಣವಾದುದ್ದಾದರೂ ಅದು ಕೇವಲ ಪ್ರತ್ಯೇಕಗೊಳಿಸುವ ವಿಚಾರವಲ್ಲ. ಯಾವುದೇ ವ್ಯಕ್ತಿ ಅಥವಾ ದೇಶವನ್ನು ಹಾನಿಗೊಳಿಸುವುದಕ್ಕಾಗಿ ನಿರ್ಮಾಣವಾದುದಲ್ಲ. ಶಾಸನ ತತ್ವಗಳು ನೈತಿಕವಾಗಿರುವುದೇ ಹೊರತು ಕೇವಲ ಕಾನೂನು ಕಟ್ಟಳೆಗಳಾಗಿ ಮಾತ್ರವೇ ಆಗಿರುವುದಿಲ್ಲ. "ನೆರೆಮನೆಯವನ ಆಸ್ತಿಪಾಸ್ತಿಗಳನ್ನು ಯಾವ ರೀತಿಯಲ್ಲೂ ಹಾನಿ ಮಾಡದ ಹಾಗೆ ನಿನ್ನ ಸ್ವಂತ ಆಸ್ತಿಯನ್ನು ಬಳಸಿಕೋ" ಎನ್ನುವ ನಾಣ್ಣುಡಿಯ ಸಾರ್ವಕಾಲಿಕ ಸತ್ಯದಲ್ಲಿ ನನಗೆ ಸಂಪೂರ್ಣ ನಂಬಿಕೆಯಿದೆ.

## VII

Swaraj can be maintained only where there is a majority of loyal and patriotic people for whom the good of the nation is paramount above all other considerations whatever, including their personal profit. Swaraj means government by the many. Where the many as immoral and selfist, their government can spell anarchy and nothing else.

ಎಲ್ಲಿ ಬಹುಸಂಖ್ಯಾತ ಪ್ರಜೆಗಳು ರಾಷ್ಟ್ರಭಕ್ತಿ ಪ್ರೇರಿತರಾಗಿ ದೇಶ ನಿಷ್ಠೆಯುಳ್ಳವರಾಗಿರುವರೋ ಅಲ್ಲಿ ಮಾತ್ರ ಸ್ವರಾಜ್ಯ ಸುಸ್ಥಿರವಾಗಿ ನಿಲ್ಲಬಲ್ಲದು. ಅವರಲ್ಲಿ ತಮ್ಮ ವೈಯಕ್ತಿಕ ಲಾಭವೂ ಒಳಗೊಂಡಂತೆ ಎಲ್ಲ ರೀತಿಯ ಆಕಾಂಕ್ಷೆಗಳಿಗಿಂತಲೂ ದೇಶದ ಒಳಿತೇ ಅತ್ಯಂತ ಪ್ರಧಾನ ಎನಿಸಬೇಕು. ಸ್ವರಾಜ್ಯ ಅಂದರೆ ಜನತೆಯಲ್ಲಿನ ಬಹುಸಂಖ್ಯೆಯವರ ರಾಜ್ಯಭಾರ. ಇಂತಹವರಲ್ಲಿ ಬಹುಮಂದಿ ನೀತಿಭ್ರಷ್ಟರೂ, ಸ್ವಾರ್ಥಪರರೂ ಆಗಿದ್ದಾದರೆ ಅಂಥ ಆಡಳಿತದಿಂದ ದೇಶ ಅರಾಜಕತ್ವದ ಬವಣೆಗೆ ತುತ್ತಾಗುವುದಲ್ಲದೇ ಅನ್ಯಥಾ ಆಗಲಾರದು.

## VIII

The Kisan or the peasant of India, whether a landless labourer or a labouring proprietor, comes first in my picture of swaraj. He is the salt of the earth which rightly belongs or should belong to him, not to the absentee landlord or Zamindar. I have no doubt that if we have democratic swaraj as it must be if the freedom is won through nonviolence, the Kisan must hold power in all its phases including political power.

ನಾನು ಚಿತ್ರಿಸಿಕೊಂಡ ಸ್ವರಾಜ್ಯದಲ್ಲಿ ಭಾರತದ ವ್ಯವಸಾಯಗಾರ ಅಥವಾ ರೈತ (ಕಿಸಾನ್), ಅವನು ಭೂರಹಿತ ಕೂಲಿಗಾರನಾಗಲಿ, ದುಡಿಯುವ ಸಣ್ಣ ಭೂಮಾಲೀಕನಾಗಲೀ, ಮೊಟ್ಟ ಮೊದಲು ಗಣನೆಗೆ ಬರುತ್ತಾನೆ. ಈ ಮಣ್ಣಿನ ಸಾರ ಅವನು. ಈ ಭೂಮಿ ವಾಸ್ತವವಾಗಿ ಅವನಿಗೇ ಸೇರಬೇಕಾದದ್ದು ಅಥವಾ ಸೇರಬೇಕಾಗಿತ್ತು. ಅದು ವ್ಯವಸಾಯ ಮಾಡದಿರುವ ಮಾಲೀಕನಿಗೋ ಜಮೀನುದಾರನಿಗೋ ಸೇರತಕ್ಕದ್ದಲ್ಲ. ನಾವು ಅಹಿಂಸಾತ್ಮಕ ಮಾರ್ಗಗಳಿಂದ ಸ್ವಾತಂತ್ರ್ಯ ಪಡೆದಲ್ಲಿ ಪ್ರಜಾಸತ್ತಾತ್ಮಕ ಸ್ವರಾಜ್ಯ ಸ್ಥಾಪಿತವಾದೀತು. ಅದರಲ್ಲಿ ಎಲ್ಲ ಕ್ಷೇತ್ರಗಳಲ್ಲೂ, ರಾಜಕೀಯ ಕ್ಷೇತ್ರವೂ ಸೇರಿ, ರೈತನೇ ಅಧಿಕಾರ ಸ್ಥಾನಗಳಲ್ಲಿರಬೇಕೆಂಬುದರಲ್ಲಿ ನನಗೆ ಎಳ್ಳಷ್ಟೂ ಸಂಶಯವಿಲ್ಲ.

## IX

Economic equality is the master key to nonviolent Independence; Working for economic equality means abolishing the eternal conflict between capital and labour.... It means the levelling down of the few rich in whose hands is concentrated the bulk of the nation's wealth of the one hand, and a levelling up of the semi-starved naked millions on the other. A nonviolent systems of government is

clearly an impossibility as long as the wide gulf between the rich and the hungry millions persists. The contrast between the palaces of Delhi and the miserable howels of the poor labouring class cannot last in a free India in which the poor will enjoy the same power as the richest in the land.

ಅಹಿಂಸಾತ್ಮಕ ಸ್ವಾತಂತ್ರ್ಯಕ್ಕೆ ಆರ್ಥಿಕ ಸಮತೆಯೇ ಅತ್ಯಂತ ಮೂಲಭೂತ ನಿಯಮ. ಆರ್ಥಿಕ ಸಮತೆಗಾಗಿ ಶ್ರಮಿಸುವುದೆಂದರೆ ಬಂಡವಾಳ ಮತ್ತು ದುಡಿಮೆಗಳ ಮಧ್ಯೆ ಇರುವ ಸತತ ಪರಸ್ಪರ ಸಂಘರ್ಷದ ನಿರ್ಮೂಲನ. ಒಂದು ಕಡೆ ರಾಷ್ಟ್ರದ ಸಂಪತ್ಸಮೃದ್ಧಿಯನ್ನೆಲ್ಲ ಕೇಂದ್ರೀಕರಿಸಿಕೊಂಡಿರುವ ಅತ್ಯಲ್ಪ ಸಂಖ್ಯೆಯ ಶ್ರೀಮಂತ ವರ್ಗವನ್ನು ಸಾಮಾನ್ಯತೆಗೆ ಇಳಿಸುವುದು; ಮತ್ತೊಂದು ಕಡೆ ಅರೆಹೊಟ್ಟೆಯ, ಅರೆನಗ್ನರಾದ ಜನಕೋಟಿಯ ಜೀವನಮಟ್ಟವನ್ನು ಮೇಲೇರಿಸುವುದು, ನಮ್ಮ ಪ್ರಯತ್ನವಾಗಬೇಕು. ಎಲ್ಲಿಯವರೆಗೆ ಶ್ರೀಮಂತರಿಗೂ ಹಸಿದ ಜನಕೋಟಿಗೂ ಮಧ್ಯೆ ಇರುವ ಅಗಾಧ ಅಂತರದ ಕಂದರ ಉಳಿದೇ ಇರುವುದೋ ಅಲ್ಲಿಯವರೆಗೂ ಒಂದು ಅಹಿಂಸಾತ್ಮಕ ರಾಜ್ಯ ವ್ಯವಸ್ಥೆ ಅಸಾಧ್ಯವೆನ್ನುವುದು ಸ್ಪಷ್ಟ. ಭಾರತದ ಸ್ವತಂತ್ರ ಸ್ವರಾಜ್ಯದಲ್ಲಿ ಈಗಿನ ದೆಹಲಿಯಲ್ಲಿರುವ ಅರಮನೆಗಳಿಗೂ ಬಡತನದ ಬೇಗೆಯಲ್ಲಿ ನರಳುವ ದುಡಿಮೆಗಾರರ ದರಿದ್ರ ಗುಡಿಸಲುಗಳಿಗೂ ಇರುವ ವಿರೋಧಾಭಾಸ ಎಂದಿಗೂ ನಿಲ್ಲಲಾರದು. ಸ್ವತಂತ್ರ ಭಾರತದಲ್ಲಿ ಅತ್ಯಂತ ಶ್ರೀಮಂತರಿಗಿರುವಷ್ಟೇ ಬದುಕಿ–ಬಾಳುವ ಅಧಿಕಾರ ಬಡವರಿಗೂ ಇರುತ್ತದೆ.

## X

Deomocracy of the swaraj of the masses can never come through untruthful and violent means, for the simple reason that the natural corollary to their use would be to remove all opposition through the suppression or extermination of the antagonists. That does not make for individual freedom. Individual freedom can have the fullest play only under a regime of unadulterated Ahimsa.

ಅಸತ್ಯದ ಮತ್ತು ವಿಧ್ವಂಸಕತೆಯ ಮಾರ್ಗದಿಂದ ಎಂದಿಗೂ ನಿಜವಾದ ಪ್ರಜಾಪ್ರಭುತ್ವ ಅಥವಾ ಬೃಹದ್ ಜನತೆಯ ಸ್ವರಾಜ್ಯವನ್ನು ಸ್ಥಾಪಿಸುವುದು ಸಾಧ್ಯವೇ ಇಲ್ಲ. ಏಕೆಂದರೆ ವಿರೋಧಿಗಳಾದವರನ್ನೆಲ್ಲ ದಬ್ಬಾಳಿಕೆಯಿಂದ ಹತ್ತಿಕ್ಕುವ ಮೂಲಕವೋ ಅಥವಾ ಅವರನ್ನು ಸಂಪೂರ್ಣವಾಗಿ ನಿರ್ಮೂಲ ಮಾಡುವುದರಿಂದಲೋ ಎಲ್ಲ ರೀತಿಯ ಪ್ರತಿರೋಧವನ್ನು ನಿವಾರಿಸಬೇಕಾಗುತ್ತದೆ. ಅಸತ್ಯ ಮತ್ತು ಹಿಂಸಾಮಾರ್ಗ ಪ್ರಯೋಗದ ಸಹಜ ಪರಿಣಾಮವೇ ಇದು. ಇದರಿಂದ ವ್ಯಕ್ತಿಗತ ಸ್ವಾತಂತ್ರ್ಯವನ್ನು ಸಾಧಿಸಿಕೊಳ್ಳಲು ಸಾಧ್ಯವಿಲ್ಲ. ನಿರ್ಮಲವಾದ ಅಹಿಂಸಾ ಪಥದ ಆಳ್ವಿಕೆಯಿಂದ ಮಾತ್ರವೇ ವ್ಯಕ್ತಿಸ್ವಾತಂತ್ರ್ಯದ ಪೂರ್ಣವಿಕಾಸ ಸಾಧಿತವಾದೀತು.

## XI

I have repeatedly observed that no school of thought can claim a monopoly of right judgement. We are all liable to err and are often obliged to revise our judgements. In a vast country like this, there must be room for all schools of honest thought and, if we cannot accept it, respect it as fully as we except them to respect ours. It is one of the Indispensible tests of a healthy public-life and therefore fitness for swaraj.

ಯಾವ ಒಂದು ವೈಚಾರಿಕ ಪಂಥವೂ ತನ್ನದೇ ಸರಿಯಾದ ತೀರ್ಪು ಎಂದು ಏಕಸ್ವಾಮ್ಯತೆಯನ್ನು ಪಡೆಯಲಾಗದೆಂದು ನಾನು ಪದೇ ಪದೇ ಹೇಳಿದ್ದೇನೆ. ನಾವೆಲ್ಲರೂ ತಪ್ಪು ಮಾಡುವುದು ಸಹಜ. ಆದ್ದರಿಂದ ಅನೇಕ ವೇಳೆ ನಮ್ಮ ತೀರ್ಪುಗಳನ್ನು ತಿದ್ದಿಕೊಳ್ಳಬೇಕಾಗುತ್ತದೆ. ನಮ್ಮದರಂತಹ ದೊಡ್ಡ ರಾಷ್ಟ್ರದಲ್ಲಿ ಪ್ರಾಮಾಣಿಕವಾದ ಎಲ್ಲ ವಿಚಾರ ಮಾರ್ಗಗಳಿಗೂ ಅವಕಾಶವಿರಬೇಕು. ನಾವು ಅವನ್ನು ಒಪ್ಪಲು ಸಾಧ್ಯವಾಗದಿದ್ದಲ್ಲಿ ನಮ್ಮ ಅಭಿಪ್ರಾಯಗಳನ್ನು ಇತರರು ಗೌರವಿಸಬೇಕೆಂದು ನಾವು ನಿರೀಕ್ಷಿಸುವಂತೆಯೇ ಇತರರದನ್ನೂ ನಾವು ಗೌರವದಿಂದ ಕಾಣಬೇಕು. ಆರೋಗ್ಯಕರ ಸಾರ್ವಜನಿಕ ಜೀವನಕ್ಕೆ ಅದೇ ಅನಿವಾರ್ಯ ಪರೀಕ್ಷೆಯ ಒಂದು ವಿಧಾನ. ಸ್ವರಾಜ್ಯಕ್ಕೆ ಅರ್ಹತೆ ಪಡೆಯಲು ಅದೇ ಅಗತ್ಯ ಮನೋಧರ್ಮ.

## XII

I value individual freedom, but you must not forget that man is essentially a social being. He has risen to his present status by learning to adjust his individualism to the requirements of social progress. Unrestricted individualism is the law of the beast of the jungle. We have to learn to strike the mean between individual freedom and social restraint. Willing submission to social restraint for the sake of the well-being of the whole society enriches both the individual and the society of which one is a member.

ವ್ಯಕ್ತಿ ಸ್ವಾತಂತ್ರ್ಯಕ್ಕೆ ನಾನು ಬೆಲೆ ಕೊಡುತ್ತೇನೆ. ಆದರೆ ಸ್ವಭಾವತಃ ಮಾನವ ಸಮಾಜಜೀವಿ. ಸಮಾಜದ ಪ್ರಗತಿಗಾಗಿ ತನ್ನ ವ್ಯಕ್ತಿಸ್ವಾತಂತ್ರ್ಯವನ್ನು ಅಳವಡಿಸಿಕೊಂಡು ವಿಕಾಸಗೊಳ್ಳುತ್ತಿರುವುದರಿಂದಲೇ ಈಗಿನ ಸುಸಂಸ್ಕೃತ ಸ್ಥಿತಿಯನ್ನು ಸಾಧಿಸಿಕೊಂಡಿದ್ದಾನೆ. ಅನಿಯಂತ್ರಿತ ವ್ಯಕ್ತಿ ಸ್ವಾತಂತ್ರ್ಯ ಒಂದು ಕಾಡುನಿಯಮ. ಆದ್ದರಿಂದ ಸಾಮಾಜಿಕ ಸಂಯಮಕ್ಕೂ ವ್ಯಕ್ತಿಸ್ವಾತಂತ್ರ್ಯಕ್ಕೂ ನಡುವಿನ ಸಾಮರಸ್ಯವನ್ನು ನಾವು ಮೈಗೂಡಿಸಿಕೊಳ್ಳಲು ಕಲಿಯಬೇಕು. ಸಮಾಜದ ಸಮಸ್ತರ ಒಳಿತಿಗಾಗಿ ಸಾಮಾಜಿಕ ಸಂಯಮಕ್ಕೆ ಸ್ವಂತ ಇಚ್ಛೆಯಿಂದ ತಲೆಬಾಗಿ ನಡೆಯುವುದರಿಂದ ವ್ಯಕ್ತಿಯ ಮತ್ತು ಸುತ್ತಲಿನ ಸಮಾಜದ ಅಭ್ಯುದಯಗಳೆರಡೂ ಸಾಧ್ಯವಾಗುತ್ತದೆ.

## XIII

If the individual ceases to count, what is left of society? Individual freedom alone can make a man voluntarily surrender himself completely to the service of society . If it is forcibly wrested from him, he becomes an automaton and society is ruined. No society can possibly be built on a denial of individual freedom.

ಮಾನವ ವ್ಯಕ್ತಿತ್ವವನ್ನು ಪರಿಗಣಿಸದಿದ್ದಲ್ಲಿ ಸಮಾಜ ಎಲ್ಲಿದ್ದೀತು? ಸಾಮಾಜಿಕ ಕಾರ್ಯಕ್ಕೆ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಳ್ಳುವ ಇಚ್ಛೆ ವ್ಯಕ್ತಿಸ್ವಾತಂತ್ರ್ಯದ ಮೂಲಕವೇ ಮೂಡಿ ಬಂದೀತು. ಅವನ ಸಹಕಾರವನ್ನು ಬಲಾತ್ಕಾರದಿಂದ ಪಡೆದುದಾದರೆ ಅವನು ಜಡ ಯಂತ್ರವಾಗಿಬಿಡುತ್ತಾನೆ. ಸಮಾಜವೂ ಹಾಳಾಗುತ್ತದೆ. ವ್ಯಕ್ತಿಸ್ವಾತಂತ್ರ್ಯವನ್ನು ನಿರಾಕರಿಸಿ ಯಾವ ಸಮಾಜವನ್ನೂ ಸದೃಢವಾಗಿ ಕಟ್ಟಲಾಗುವುದೇ ಇಲ್ಲ.

## XIV

We are inheritors of a rural civilization. The vastness of our country, the vastness of the population, the situation and the climate of the country have, in my opinion, destined it for a rural civilization. Its defects are well known, but not one of them is irremediable. To uproot it and substitute for it an urban civilization seems to me an impossibility, unless we are prepared by some drastic means to reduce the population from three hundred millions to three or say even thirty. I can therefore suggest remedies on the assumption that we must perpetuate the present rural civlization and endeavour to rid it of its acknowledged defects. This can only be done if the youth of the country will settle down to village lives. And if they will do this, they must reconstruct their life and pass every day of their vacation in the villages surrounding their colleges & schools. They should think of setting down in villages.

ನಾವು ಭಾರತದ ಗ್ರಾಮೀಣ ಸಂಸ್ಕೃತಿಯೊಂದರ ಉತ್ತರಾಧಿಕಾರಿಗಳು. ಈ ದೇಶದ ವಿಸ್ತಾರ, ಇದರ ಜನಬಾಹುಳ್ಯ ಭೌಗೋಳಿಕ ಸ್ಥಾನ ಮತ್ತು ಈ ದೇಶದ ವಾಯುಗುಣ ಎಲ್ಲವೂ ಒಂದು ಗ್ರಾಮ ಸಂಸ್ಕೃತಿಗಾಗಿಯೇ ನಿಯತಗೊಂಡಿದೆ. ಅದರ ಅವಗುಣಗಳು ಎಲ್ಲರಿಗೂ ಗೊತ್ತಿದೆ. ಆದರೆ ಅವು

ಯಾವುವೂ ಪರಿಹಾರಕ್ಕೆ ಮೀರಿದುವಲ್ಲ. ಈ ಸಂಸ್ಕೃತಿಯನ್ನು ಪಲ್ಲಟಗೊಳಿಸಿ ಒಂದು ನಗರ ಸಂಸ್ಕೃತಿಯನ್ನು ತಂದು ಸ್ಥಾಪನೆ ಮಾಡುವುದು ಅಸಾಧ್ಯವೇ ಸರಿ ಎನಿಸುತ್ತದೆ. ಈಗಿನ (1929ರಲ್ಲಿ) ಮೂವತ್ತು ಕೋಟಿ ಜನಸಂಖ್ಯೆಯನ್ನು ಮೂರು ಕೋಟಿಗೋ, ಕನಿಷ್ಠ ಮೂವತ್ತು ಲಕ್ಷಕ್ಕೋ ಇಳಿಸಿಬಿಡಲು ಅತ್ಯಂತ ಕಠಿಣ ಕ್ರಮಗಳನ್ನು ತೆಗೆದುಕೊಂಡಲ್ಲದೆ ನಗರೀಕರಣ ಅಸಾಧ್ಯ. ಆದ್ದರಿಂದ ನಮ್ಮ ಗ್ರಾಮೀಣ ಸಂಸ್ಕೃತಿಯನ್ನೇ ಊರ್ಜಿತಗೊಳಿಸಿ ಅದರಲ್ಲಿ ನುಸುಳಿರುವ ಅನೇಕ ಅವಗುಣಗಳನ್ನು ಅರಿತು ನಿವಾರಿಸಿ ಸುಧಾರಿಸಿಕೊಳ್ಳಬೇಕೆಂದು ಮಾತ್ರವೇ ನಾನು ಸಲಹೆ ನೀಡಬಲ್ಲೆ. ನಮ್ಮ ಸುಶಿಕ್ಷಿತ ಯುವಜನರು ಹಳ್ಳಿಗಳಲ್ಲಿ ನೆಲೆಸುವುದರಿಂದ ಮಾತ್ರವೇ ಇದು ಸಾಧ್ಯವಾದೀತು. ಇದನ್ನು ಕೈಗೊಳ್ಳಲು ಅವರು ತಮ್ಮ ಜೀವನ ಶೈಲಿಯನ್ನು ಬದಲಿಸಿಕೊಳ್ಳಬೇಕು. ತಮ್ಮ ಕಾಲೇಜು ಅಥವಾ ಶಾಲೆಗಳ ಸುತ್ತ ಇರುವ ಗ್ರಾಮಗಳಲ್ಲೇ ತಮ್ಮ ರಜೆಯ ದಿನಗಳನ್ನು ಕಳೆಯಬೇಕು. ಗ್ರಾಮದಲ್ಲೇ ನೆಲೆಸಿ ಜೀವಿಸಲು ಸಂಕಲ್ಪಮಾಡಬೇಕು.

## XV

Swadeshi is that spirit in us which restricts us to the use and service of our immediate surroundings to the exclusion of the more remote. Thus, as for religion in order to satisfy the requirements of the definition, I must restrict myself to my ancestral religion. That is, the use of my immediate religious surroundings. If I find it defective, I should serve it by purging it of its defects. In the domain of politics I should make use of the indigenous institutions and serve them by curing them of their proved defects. In that of economics I should use only things that are produced by my immediate neighbours and serve those industries by making them efficient and complete where they might be found wanting. It is suggested that such Swadeshi if reduced to practice will lead to the millenium.

ನನ್ನ ಸಮೀಪದಲ್ಲಿರುವ ಪರಿಸರದ ಬಳಕೆ ಮತ್ತು ಸೇವೆಗಾಗಿ ಹೆಚ್ಚು ದೂರದಲ್ಲಿರುವುದನ್ನು ಬಿಟ್ಟುಕೊಡುವಂತೆ ನಮ್ಮ ಮಿತಿಯನ್ನು ವಿಧಿಸುವ ನನ್ನೊಳಗಿನ ಭಾವನೆಯೇ ನಿಜವಾದ ಸ್ವದೇಶೀ ವಿಚಾರ. ಈ ವಿವರಣೆಯ ಪ್ರಕಾರ ನಡೆಯುವಾಗ ಧರ್ಮಾಚರಣೆಯ ವಲಯದಲ್ಲೂ ಆರ್ಷೇಯ ಪರಂಪರೆಯಿಂದ ಲಭ್ಯವಾಗಿರುವ ನನ್ನ ಕುಲಧರ್ಮಕ್ಕೇ ಮಿತಿಗೊಳಿಸಿಕೊಳ್ಳಬೇಕು. ಅಂದರೆ ನನಗೆ ಸಮೀಪವಾದ ಧಾರ್ಮಿಕ ಪರಿಸರವನ್ನೇ ಬಳಸಿಕೊಳ್ಳಬೇಕು. ಅದರಲ್ಲಿ ದೋಷಗಳಿದ್ದಲ್ಲಿ ಅವನ್ನು ನಿವಾರಿಸಲು ನಾನು ಶ್ರಮಿಸಬೇಕು. ರಾಜಕೀಯ ವಲಯದಲ್ಲಿ ನನ್ನ ಸಮಾಜದಲ್ಲಿನ ಸ್ಥಳೀಯ ಸಂಸ್ಥೆಗಳನ್ನು ಬಳಸಿಕೊಂಡು ಅವುಗಳಲ್ಲಿರುವ ಸರ್ವವಿವಿಧ ದೋಷಗಳ ನಿವಾರಣೆ ಮಾಡುವುದರ ಮೂಲಕ ಸೇವೆ ಸಲ್ಲಿಸಬೇಕು. ಆರ್ಥಿಕ ಕ್ಷೇತ್ರದಲ್ಲಿ ನನ್ನ ಅತ್ಯಂತ ಸಮೀಪದ ನೆರೆಹೊರೆಯವರು ಉತ್ಪಾದಿಸುವ ವಸ್ತುಗಳನ್ನು ಮಾತ್ರವೇ ಬಳಸಬೇಕು. ಈ ಉದ್ಯಮಗಳು ದಕ್ಷತೆಯಿಂದ ನಡೆದು ಎಲ್ಲಿ ಕೊರತೆಗಳಿವೆಯೋ ಅವುಗಳನ್ನು ತುಂಬಿಕೊಳ್ಳಲು ಶಕ್ತವಾಗುವಂತೆ ಸೇವೆ ಸಲ್ಲಿಸಬೇಕು. ಇಂಥ ಸ್ವದೇಶೀ ಭಾವನೆಯನ್ನು ಕಾರ್ಯಗತಗೊಳಿಸುವುದಾದರೆ ಅತ್ಯಂತ ನೆಮ್ಮದಿಯ ಸ್ಥಿತಿಗೆ ದೇಶವನ್ನು ಅದು ಕೊಂಡೊಯ್ಯಬಲ್ಲದು ಎನ್ನುವುದೇ ನನ್ನ ಸಲಹೆ.

## XVI

... This nation had courts, lawyers and doctors, but they were all within moral bounds. Everyone knew that these professions were not particularly superior; moreover these vakils and vaids did not rob people. They were considered people's dependents, not their masters. Justice was tolerably fair. The ordinary rule was to avoid courts. There were no touts to lure people into them. This evil, too, was noticeable only in and around capitals. The common people lived independently and followed their agricultural occupation. They enjoyed true Home rule.

ಈ ದೇಶದಲ್ಲಿ ನ್ಯಾಯಾಲಯಗಳಿದ್ದವು, ವಕೀಲರಿದ್ದರು, ವೈದ್ಯರಿದ್ದರು ಆದರೆ ಅವರೆಲ್ಲರೂ ಒಂದು ನೈತಿಕ ಚೌಕಟ್ಟಿನಲ್ಲೇ ನಡೆಯುತ್ತಿದ್ದರು. ಈ ವೃತ್ತಿಗಳಾವುವೂ ಇತರ ವೃತ್ತಿಗಳಿಗಿಂತ ಬಹಳ ಮೇಲ್ಪಟ್ಟದ್ದು, ವಿಶೇಷವಾದುವು ಎಂದು ಯಾರೂ ಭಾವಿಸಿರಲಿಲ್ಲ. ಅಲ್ಲದೆ ಆಗಿನ ವಕೀಲರೂ, ವೈದ್ಯರೂ ಜನತೆಯನ್ನು ಸುಲಿಗೆ ಮಾಡುತ್ತಿರಲಿಲ್ಲ. ಜನತೆಯ ಅವಲಂಬಿಗಳಾಗಿದ್ದ ಇವರು ಜನರ ಯಜಮಾನರೆನಿಸಿರಲಿಲ್ಲ. ನ್ಯಾಯ ವಿತರಣೆ ಬಹುಮಟ್ಟಿಗೆ ಯೋಗ್ಯ ರೀತಿಯಲ್ಲಿ ನಡೆಯುತ್ತಿತ್ತು. ನ್ಯಾಯಾಲಯಗಳ ಕಟ್ಟೆ ಹತ್ತುವುದನ್ನು ದೂರ ಮಾಡುವುದೇ ಸಾಮಾನ್ಯವಾದ ನಿಯಮವಾಗಿರುತ್ತಿತ್ತು. ಜನರನ್ನು ಕಟ್ಟಳೆಗಳಿಗಳೆಯುವ ಮಧ್ಯವರ್ತಿಗಳಿರುತ್ತಿರಲಿಲ್ಲ. ರಾಜಧಾನಿ ಸ್ಥಳಗಳಲ್ಲಿ ಅದರ ಸುತ್ತಮುತ್ತಲಲ್ಲಿ ಮಾತ್ರವೇ ಈ ಅನಿಷ್ಠ ಕಾಣಿಸಿಕೊಳ್ಳುತ್ತಿತ್ತು. ತಮ್ಮ ವ್ಯವಸಾಯ ವೃತ್ತಿಗಳಲ್ಲಿ ನಿರತರಾಗಿ ಸಾಮಾನ್ಯ ಜನ ಸಹಜವಾಗಿಯೇ ಸ್ವತಂತ್ರ ಬಾಳನ್ನು ಬಾಳುತ್ತಿದ್ದರು. ಅವರು ನಿಜವಾದ ಸ್ವರಾಜ್ಯ (ಹೋಂ ರೂಲ್)ವನ್ನು ಆನಂದದಿಂದ ಅನುಭವಿಸುತ್ತಿದ್ದರು.

## XVII

Villages have suffered long from neglect by those who have had the benefit of higher education. They have chosen the city life. The village movement is an attempted to establish healthy contact with the villages by inducing those who are fired with the spirit of service to settle in villages and find self expression in the dedicated service of the villagers.

ಉನ್ನತ ಶಿಕ್ಷಣ ಪಡೆದಿರುವ ವರ್ಗದವರ ಅಸಡ್ಡೆಯಿಂದ ಬಹಳ ಕಾಲದಿಂದಲೂ ಹಳ್ಳಿಗಳು ಸಂಕಟಗಳಿಗೆ ಗುರಿಯಾಗಿದೆ. ವಿದ್ಯಾವಂತರೆಲ್ಲ ನಗರವಾಸಿಗಳಾಗುತ್ತಿದ್ದಾರೆ. ಸೇವಾ ನಿಷ್ಠೆಯಿಂದ ಪ್ರಬಲವಾಗಿ ಪ್ರೇರಿತರಾದವರು ಗ್ರಾಮಗಳಲ್ಲಿ ನೆಲೆಸುವಂತೆ ಮಾಡಿ ಗ್ರಾಮೀಣ ಜನತೆಯ ಸೇವೆಗೆ ಅರ್ಪಣಾ ಭಾವನೆಯಿಂದ ಸಿದ್ಧರಾಗಿ ಆತ್ಮವಿಕಾಸ ಪಡೆಯುವಂತೆ ಗ್ರಾಮಸ್ಥರ ನಿಕಟವಾದ ಮತ್ತು ಆರೋಗ್ಯಕರವಾದ ಸಂಪರ್ಕ ಸಾಧಿಸುವುದೇ ಗ್ರಾಮಪುನರುಜ್ಜೀವನ ಚಳುವಳಿ.

## XVIII

I am convinced that if India is to attain true freedom and through India the world also, then sooner or later, the fact must be recognised that people will have to live in small face to face communities or villages. Crores of people will never be able to live at peace with each other in cities and palaces.

ಭಾರತಕ್ಕೆ ನಿಜವಾದ ಸ್ವಾತಂತ್ರ್ಯ ಲಭಿಸುವುದಾದರೆ, ಅದರಿಂದಾಗಿ ಜಗತ್ತಿಗೂ ಸ್ವಾತಂತ್ರ್ಯ ಸಾಧಿತವಾಗಬೇಕಾದರೆ, ಇಂದಾಗಲೀ, ನಾಳೆಯಾಗಲೀ ಜನರು ಸಣ್ಣ ಸಣ್ಣ ಪರಸ್ಪರ ನಿಕಟವಾದ ಸಾಮೂಹಿಕ ನೆಲೆಗಳಲ್ಲಿ ಅಥವಾ ಗ್ರಾಮಗಳಲ್ಲಿ ಜೀವಿಸಬೇಕೆಂಬ ವಾಸ್ತವ ಸತ್ಯವನ್ನು ಕಂಡುಕೊಳ್ಳುವುದು ಅತ್ಯಗತ್ಯ. ಕೋಟಿ ಕೋಟಿ ಜನ ದೊಡ್ಡ ನಗರಗಳಲ್ಲೂ ಅರಮನೆಗಳಲ್ಲೂ ಪರಸ್ಪರ ಶಾಂತಿಯುತ ಬಾಳನ್ನು ಎಂದೆಂದಿಗೂ ರೂಪಿಸಿಕೊಳ್ಳಲಾರರೆಂಬುದು ಖಚಿತ.

## XIX

You must not imagine that I am envisaging our village life as it is today. My ideal village will contain intelligent human beings. They will not live in dirt and darkness as animals. Men and women will be free and able to hold their own against any one on the world. No one will be idle. No one will wallow in luxury. Every one will have to contribute his quota of manual labour. I can very well envisage all modern conveniences like railways, post and telegraph etc. in village communities. For me it matters to obtain the real core of wellbeing and the rest will fit themselves of their own accord. If we let go the real thing all else is gone.

ಈಗಿರುವಂತೆಯೇ ನಮ್ಮ ಗ್ರಾಮಜೀವನ ಇರಬೇಕೆಂದು ನಾನು ಬಯಸುತ್ತಿದ್ದೇನೆ ಎಂದು ಭಾವಿಸಬಾರದು. ನನ್ನ ಆದರ್ಶ ಗ್ರಾಮದಲ್ಲಿ ಜಾಣರಾದ ಜನ ವಾಸಿಸುತ್ತಾರೆ. ಪ್ರಾಣಿಗಳಂತೆ ಕತ್ತಲಿನ ಕೊಳೆಗೇರಿಯಲ್ಲಿ ಬದುಕುತ್ತಿರುವುದಿಲ್ಲ. ಸಮಸ್ತ ಜಗತ್ತಿನೆದುರು ನಿರ್ಭಯವಾಗಿ ನಿಲ್ಲಲು ಶಕ್ತರಾದ ಪುರುಷರು, ಸ್ತ್ರೀಯರು ಸ್ವತಂತ್ರ ವ್ಯಕ್ತಿಗಳಾಗಿರುತ್ತಾರೆ. ಯಾರೂ ಸೋಮಾರಿಗಳಾಗಿರರು. ಯಾರೂ ಭೋಗವಿಲಾಸ ಜೀವನದಲ್ಲಿ ಲೋಲುಪ್ತರಾಗುವುದಿಲ್ಲ. ಪ್ರತಿಯೊಬ್ಬರೂ ತಮ್ಮ ಪಾಲಿನ ಶ್ರಮ ನಿಷ್ಠೆಯನ್ನು ಸಮಾಜಕ್ಕೆ ಅರ್ಪಿಸಬೇಕಾಗುತ್ತದೆ. ಇಂಥ ಗ್ರಾಮದಲ್ಲಿ ಆಧುನಿಕ ಸೌಲಭ್ಯಗಳಾದ ರೈಲು, ಅಂಚೆ ಮತ್ತು ತಂತಿ ಸೇವೆಗಳು ಮುಂತಾದುವೆಲ್ಲವೂ ಇರುತ್ತವೆ ಎಂದು ನಾನು ಭಾವಿಸಬಲ್ಲೆ. ನನ್ನ ಮಟ್ಟಿಗೆ ಹೇಳುವುದಾದರೆ ಜೀವನದ ನೆಮ್ಮದಿ ಲಭ್ಯವಾಗುವುದು ಅಗತ್ಯ. ಮಿಕ್ಕೆಲ್ಲವೂ ತಾನಾಗಿ ಒದಗುತ್ತವೆ. ಆದರೆ ನಿಜವಾದ ತಿರುಳು ಮಾಯವಾದರೆ ಎಲ್ಲವೂ ನಾಶವಾಗುತ್ತದೆ.

## XX

I would say that if the village perishes India will perish too. India will be no more India. Her own mission in the world will get lost. The revival of the villages is possible only when it is no more exploited. Industrialization on a mass scale will necessarily lead to passive or active exploitation of the villagers as the problems of competition and marketing come. Therefore we have to concentrate on the village being self-contained, manufacturing mainly for use. Provided this character of the village industry is maintained, there would be no objection to villagers using even the most modern machines and tools that they can make and afford to use. Only they should not be used as a means of exploitation of others.

ಗ್ರಾಮಗಳು ನಾಶವಾದಲ್ಲಿ ಭಾರತವೂ ನಾಶವಾಗುತ್ತದೆ ಎಂದು ನಾನು ಹೇಳಬಯಸುತ್ತೇನೆ. ಆಗ ಭಾರತ, ಭಾರತ ದೇಶವಾಗಿ ಉಳಿದಿರುವುದಿಲ್ಲ. ಈ ರಾಷ್ಟ್ರ ಯಾವ ಸಂದೇಶವನ್ನು ಜಗತ್ತಿಗೆ ನೀಡಬೇಕೋ ಅದು ಇಲ್ಲವಾಗುತ್ತದೆ. ಗ್ರಾಮಗಳನ್ನು ಶೋಷಣೆ ಮಾಡುವುದು ಪೂರ್ಣವಾಗಿ ನಿಂತರೆ ಮಾತ್ರವೇ ಗ್ರಾಮ ಪುನರುಜ್ಜೀವನ ಸಾಧ್ಯವಾದೀತು. ಬೃಹತ್ ರೀತಿಯ ಔದ್ಯೋಗಿಕ ಯಾಂತ್ರೀಕರಣದಿಂದ ಸ್ಪರ್ಧೆಯ ಮತ್ತು ಮಾರುಕಟ್ಟೆಗಳ ಸಮಸ್ಯೆಗಳು ಉಲ್ಬಣವಾಗುವುದರಿಂದ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಹಳ್ಳಿಗಳ ಆರ್ಥಿಕ ಶೋಷಣೆ ಅನಿವಾರ್ಯವಾಗಿಬಿಡುತ್ತದೆ. ಆದ್ದರಿಂದ ಗ್ರಾಮಗಳು ಸ್ವಾವಲಂಬಿಗಳಾಗುವ ಕಡೆಗೆ ನಾವು ಗಮನವನ್ನೆಲ್ಲ ಕೇಂದ್ರೀಕರಿಸಬೇಕು. ಪ್ರಮುಖವಾಗಿ ತನ್ನ ಬಳಕೆಗಾಗಿಯೇ ವಸ್ತುಗಳನ್ನು ಉತ್ಪಾದಿಸುವಂತಾಗಬೇಕು. ಗ್ರಾಮಜೀವನದಲ್ಲಿ ಈ ಗುಣಗಳಿರುವ ಗ್ರಾಮಕೈಗಾರಿಕೆಗಳನ್ನು ವ್ಯವಸ್ಥೆಗೊಳಿಸುವುದಾದರೆ ಗ್ರಾಮಸ್ಥರು ಅತ್ಯಂತ ಆಧುನಿಕ ಯಂತ್ರ ಕುಶಲತೆಗಳನ್ನೂ, ಉಪಕರಣಗಳನ್ನೂ ಬಳಸಿಕೊಳ್ಳಲು ಯಾವ ಅಭ್ಯಂತರವೂ ಇರುವುದಿಲ್ಲ. ಇವುಗಳನ್ನು ತಾವೇ ಮಾಡಿಕೊಂಡು ಬಳಸಲು ಸಮರ್ಥರಾಗಬೇಕು. ಈ ಸಾಧನಗಳನ್ನು ಬಳಸಿಕೊಂಡು ಇತರರನ್ನು ಶೋಷಣೆ ಮಾಡದ ಹಾಗೆ ಇರಬೇಕಾದುದು ಅತ್ಯಗತ್ಯ.

## XXI

We must train these masses of men who have a heart of gold, who feel for the country, who want to be taught and led. But a few intelligent, sincere workers are needed, and the whole nation can be organised to act intelligently and democracy can be evolved out of mobocracy.

ಸ್ವರ್ಣಮಯ ಹೃದಯವಂತಿಕೆ, ತನ್ನ ದೇಶಕ್ಕಾಗಿ ಸಂವೇದನೆ, ಅದಕ್ಕಾಗಿ ಶಿಕ್ಷಣ ಪಡೆಯಲು ಮತ್ತು ಮುನ್ನಡೆಸಲ್ಪಡಲು ಆಕಾಂಕ್ಷೆ – ಇವುಗಳಿಂದ ಕೂಡಿರುವ ಜನಕೋಟಿಯ ತರಬೇತಿಯನ್ನು ನಾವು ಕೈಗೊಳ್ಳಬೇಕಾಗಿದೆ. ಇದಕ್ಕಾಗಿ ಕೆಲವು ಜಾಣರೂ, ಪ್ರಾಮಾಣಿಕರೂ ಆದ ಕಾರ್ಯಕರ್ತರ ಅಗತ್ಯವಿದೆ. ಈ ಕಾರ್ಯ ಕೈಗೊಂಡಾಗ ಇಡೀ ರಾಷ್ಟ್ರವೇ

ಜಾಣತನದಿಂದ ವರ್ತಿಸುವಂತೆ ಸಂಘಟಿಸಬಹುದು. ಆಗ ಜನಜಂಗುಳಿಯ ಅರಾಜಕ ಸ್ಥಿತಿಯಿಂದ ಸುವ್ಯವಸ್ಥಿತ ಪ್ರಜಾಪ್ರಭುತ್ವ (ಸ್ವರಾಜ್ಯ)ದೆಡೆಗೆ ನಾವು ವಿಕಾಸಗೊಳ್ಳಬಹುದು.

## XXII

We have to make a choice between India of the villages that are as ancient as herself and the India of cities which are a creation of foreign domination. Today cities dominate and drain the villages so that they are crumbling to ruin. Expolitation of villages is itself organised violence, we will have to give villages their proper place.

ತನ್ನಷ್ಟೇ ಪ್ರಾಚೀನವಾದ ಗ್ರಾಮಗಳ ಭಾರತವನ್ನೋ ಅಥವಾ ವಿದೇಶೀ ಪ್ರಾಬಲ್ಯದಿಂದ ಸೃಷ್ಟಿಯಾಗಿ ಈಗ ಬೆಳೆದಿರುವ ನಗರಗಳ ಭಾರತವನ್ನೋ ಈ ಎರಡರಲ್ಲಿ ಒಂದನ್ನು ನಾವು ಆರಿಸಿಕೊಳ್ಳಬೇಕಾಗಿದೆ. ಗ್ರಾಮಗಳ ಸಂಪದ್ಸಮೃದ್ಧಿಯನ್ನೆಲ್ಲ ಹೀರುತ್ತಿರುವ ನಗರಗಳು ಈಗ ಪ್ರಭುತ್ವ ನಡೆಸುತ್ತಾ ಗ್ರಾಮಜೀವನ ನಾಶವಾಗಿ ಹೋಗುವಂತೆ ಮಾಡಿವೆ. ಗ್ರಾಮಗಳ ಶೋಷಣೆ ಒಂದು ವ್ಯವಸ್ಥಿತ ಹಿಂಸೆ ಎನಿಸುತ್ತದೆ. ಸ್ವರಾಜ್ಯದಲ್ಲಿ ನಾವು ನಮ್ಮ ಗ್ರಾಮಗಳಿಗೆ ಯೋಗ್ಯಸ್ಥಾನ ಕೊಡಲೇಬೇಕು.

## XXIII

The whole programme of village reconstruction will be a structure on sand if it is not built on the solid foundation of economic equality. Economic equality can never be supposed to mean possession of an equal amount of all wordly goods by everyone. It does mean, however, that everyone will have a proper house to live in, sufficient and balanced died to eat, and sufficient khadi with which to cover oneself. It also means that the cruel inequality that obtains today will be removed by purely nonviolent means.

ಆರ್ಥಿಕ ಸಮಾನತೆಯ ಭದ್ರ ಬುನಾದಿಯ ಮೇಲೆ ನಿರ್ಮಾಣ ಮಾಡದೇ ಹೋದಲ್ಲಿ ಗ್ರಾಮ ಪುನರ್ರಚನೆಯ ಸಮಗ್ರ ಕಾರ್ಯಕ್ರಮಗಳೆಲ್ಲ ಮರಳಿನ ಮೇಲೆ ಕಟ್ಟುವ ರಚನೆಯಾಗುತ್ತದೆ. ಆರ್ಥಿಕ ಸಮತೆ ಎಂದೊಡನೆ ಸಮಸ್ತ ಪ್ರಾಪಂಚಿಕ ವಸ್ತುಗಳೆಲ್ಲವನ್ನೂ ಎಲ್ಲರೂ ಸಮಾನವಾಗಿ ಹೊಂದಿರಬೇಕು ಎಂದು ಎಂದಿಗೂ ಅರ್ಥವಲ್ಲ. ಆದರೆ ಒಂದು ವಾಸಕ್ಕೆ ಯೋಗ್ಯಮನೆ, ಸಾಕಷ್ಟು ಮತ್ತು ಪುಷ್ಟಿಕರ ಆಹಾರ ಮತ್ತು ಮೈ ಮುಚ್ಚುವುದಕ್ಕಾಗಿ ಬಳಸಲು ಸಾಕಷ್ಟು ಖಾದಿ ಬಟ್ಟೆ – ಇವುಗಳು ಎಲ್ಲರಿಗೂ ದೊರೆತಿರಬೇಕು ಎನ್ನುವುದು ಖಂಡಿತವಾಗಿ ಸಮಾನತೆಯ ತಿರುಳು. ಹಾಗೆಯೇ ಈಗಿರುವ ದಾರುಣ ಆರ್ಥಿಕ ಸಮಾನತೆಯನ್ನು ನಿರಸನಗೊಳಿಸಲು ಅಹಿಂಸಾತ್ಮಕ ಮಾರ್ಗಗಳನ್ನು ಮಾತ್ರ ಅನುಸರಿಸಬೇಕೆಂಬುದೂ ಅದರಲ್ಲಿ ಇಂಗಿತವಾಗಿವೆ.

## XXIV

Civilization in the real sense of the term consists not in the multiplication but in deliberate and voluntary reduction of wants, which promotes real happiness and contentment and increases the capacity for service. One can reduce one's wants by preserverance and the reduction of wants makes for happiness - a healthy body and a peaceful mind.

Every man has an equal right to the needs of life as birds and beast have in nature. And since every right carries with it is a corresponding duty and the corresponding remedy for resisting any attack upon it, it is merely a matter of finding out the corresponding duties and remedies to vindicate the elementary fundamental equality. The corresponding duty is to labour with my limbs and the corresponding remedy is to noncooperate with him who deprives me of the fruits of my labour.

ನಮ್ಮ ಅವಶ್ಯಕತೆಗಳನ್ನು ಅತಿಯಾಗಿ ಹೆಚ್ಚಿಸಿಕೊಂಡು ಹೋಗುವುದರಿಂದಲ್ಲ, ಅವುಗಳನ್ನು ಸ್ವಯಂಪ್ರೇರಿತರಾಗಿ, ಬುದ್ಧಿಪೂರ್ವಕವಾಗಿ ಕಡಿಮೆ ಮಾಡಿಕೊಳ್ಳುವುದೇ ನಾಗರಿಕತೆಯ ನಿಜವಾದ ಲಕ್ಷಣ. ಅದರಿಂದ ನಿಜವಾದ ಸಂತೋಷವೂ ತೃಪ್ತಿ ಭಾವನೆಯೂ ವೃದ್ಧಿಸಿ, ಸೇವೆಯ ಸಾಮರ್ಥ್ಯ ಹೆಚ್ಚಾಗುತ್ತದೆ. ಸತತ ಪ್ರಯತ್ನದಿಂದ ನಮ್ಮ ಬೇಕುಗಳನ್ನು ಕಡಿತಗೊಳಿಸುವುದು ಸಾಧ್ಯ. ಹೀಗೆ ಸಾಧಿಸಿದ ಸಂಯಮ ಹರ್ಷದಾಯಕವಾಗುತ್ತದೆ. ಅದರಿಂದ ದೇಹಾರೋಗ್ಯವೂ ಮನಶ್ಶಾಂತಿಯೂ ಲಭ್ಯವಾದೀತು.

ಪ್ರಕೃತಿಯಲ್ಲಿನ ಮೃಗ ಪಕ್ಷಿಗಳಿಗಿದ್ದಂತೆ ಪ್ರತಿಯೊಬ್ಬ ಮಾನವನಿಗೂ ಜೀವನಾವಶ್ಯಕತೆಗಳ ಬಗ್ಗೆ ಸಮಾನ ಹಕ್ಕಿರುತ್ತದೆ. ಪ್ರತಿಯೊಂದು ಹಕ್ಕಿನ ಜೊತೆಗೂ ಅದಕ್ಕನುಗುಣವಾದ ಕರ್ತವ್ಯವೂ ಇರುತ್ತದೆ. ಹಾಗೆಯೇ ಅವುಗಳ ಮೇಲೆ ದಬ್ಬಾಳಿಕೆ ಸಂಭವಿಸಿದಾಗ ಅದಕ್ಕನುಗುಣವಾದ ಪರಿಹಾರ ಮಾರ್ಗವೂ ಉಂಟು. ಆದ್ದರಿಂದ ನಮ್ಮ ಮೂಲಭೂತವಾದ ಪ್ರಾಥಮಿಕ ಸಮಾನತೆಯನ್ನು ಸ್ಥಾಪಿಸಿಕೊಳ್ಳಲು ನಮ್ಮ ಹಕ್ಕುಗಳಿಗನುಗುಣವಾದ ಕರ್ತವ್ಯಗಳನ್ನು ಅರಿತುಕೊಳ್ಳುವುದೇ ಮುಖ್ಯ. ಶರೀರಶ್ರಮದ ದುಡಿಮೆಯೇ ಪ್ರಾಥಮಿಕ ಕರ್ತವ್ಯ. ಅದರ ಫಲಾನುಭವವನ್ನು ಕಸಿದುಕೊಳ್ಳುವ ಯಾವುದೇ ಶಕ್ತಿಯಾಗಲಿ ಅದರೊಡನೆ ಅಸಹಕಾರ ಮಾಡುವುದೇ ಪರಿಹಾರ ಮಾರ್ಗ.

## XXV

Man's triumph will consist in substituting the struggle for existence by the struggle for mutual service. The law of the brute will be replaced by the law of man.

ಬದುಕುವ ಹೋರಾಟಕ್ಕೆ ಬದಲಾಗಿ ಪರಸ್ಪರ ಸೇವೆಯನ್ನು ರೂಢಿಸಿಕೊಳ್ಳುವುದೇ ಮಾನವಜೀವಿತದ ಪರಮ ವಿಜಯ ಸಾಧನೆ. ಪಶುಬಲದ ಶಾಸನವನ್ನು ಮಾನವಸಹಜ ಶಾಸನಕ್ಕೆ ಬದಲು ಮಾಡುವುದು ಅಗತ್ಯ

## XXVI

All activites should be centered in Truth. Truth should be the very breath of our life. When once this stage in the pilgrim's progress is reached all other rules of correct living will come without effort, and

obedience to them will be instinctive. But without truth it is impossible to observe any principles or rules in life.

ಸಮಸ್ತ ಕಾರ್ಯಗಳೂ ಸತ್ಯ ನಿಷ್ಠೆಯಿಂದ ಪ್ರೇರಿತವಾಗಬೇಕು. ಸತ್ಯವೇ ಜೀವನದ ಉಸಿರಾಗಬೇಕು. ಜೀವನಯಾತ್ರೆಯಲ್ಲಿ ಈ ಸ್ಥಿತಿ ಮುಟ್ಟಿದಾಗ ಸುಯೋಗ್ಯವಾದ ಬದುಕಿನ ನಿಯಮಗಳು ಯಾವ ಶ್ರಮವೂ ಇಲ್ಲದೇ ಮೈಗೂಡಿಕೊಳ್ಳುತ್ತವೆ. ಅಂಥ ನಿಯಮಗಳ ಪಾಲನೆಯೂ ಸ್ವಭಾವಸಹಜವಾಗುತ್ತದೆ. ಆದರೆ ಸತ್ಯ ನಿಷ್ಠೆಗೆ ಶರಣಾಗದೇ ಬಾಳಿನಲ್ಲಿ ತತ್ವ ಶ್ರದ್ಧೆಯಾಗಲೀ ನಿಯಮಬದ್ಧತೆಯಾಗಲೀ ಎಂದಿಗೂ ಸಾಧ್ಯವಾಗುವುದೇ ಇಲ್ಲ.

## XXVII

I am humble enough to admit that there is much that we can profitably assimilate from the west. Wisdom is no monopoly of one continent or one race.. My resistance to western civilization is really a resistance to its indiscriminate and thoughtless imitation based on the assumption that Asiatics are fit only to copy everything that comes from the west... I do believe that if India has patience enough to go through the fire of suffering and resist any unlawful encroachment upon her own civilization, which, imperfect though it undoubtedly is, has hiterto stood the revenges of time. She can make a lasting contribution to the peace and solid progress of the world.

ಪಾಶ್ಚಿಮಾತ್ಯ ದೇಶಗಳಿಂದ ನಾವು ಕಲಿತು ಅರಗಿಸಿಕೊಳ್ಳಬೇಕಾದ ಅನೇಕ ವಿಷಯಗಳುಂಟು ಎಂದು ಒಪ್ಪಿಕೊಳ್ಳುವಷ್ಟು ನಮ್ರತೆ ನನ್ನಲ್ಲಿದೆ. ವಿವೇಕವೆನ್ನುವುದು ಒಂದೇ ರಾಷ್ಟ್ರದ ಅಥವಾ ಒಂದೇ ಜನಾಂಗದ ಸ್ವತ್ತೇನೂ ಅಲ್ಲ. ಆದರೆ ಏಷ್ಯಾ ಖಂಡದವರೆಲ್ಲ ಪಾಶ್ಚಿಮಾತ್ಯ ದೇಶಗಳಿಂದ

ಬರುವುದನ್ನೆಲ್ಲ ಅನುಕರಣೆ ಮಾಡುವುದಕ್ಕೆ ಮಾತ್ರ ಅರ್ಹರೆಂದು ಮೊದಲೇ ನಿರ್ಧರಿಸಿ, ಅಲ್ಲಿಂದ ಬರುವುದನ್ನೆಲ್ಲ ವಿವೇಚನಾರಹಿತರಾಗಿ, ತಾರತಮ್ಯ ವಿವೇಕ ಶೂನ್ಯರಾಗಿ ಅನುಕರಿಸುವುದನ್ನು ವಿರೋಧಿಸುವುದೇ ನಾನು ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವಗಳನ್ನೆದುರಿಸಿ ನಿಂತಿರುವುದರ ಅರ್ಥ.

ಆದರೆ ನನ್ನಲ್ಲಿ ಪೂರ್ಣ ನಂಬಿಕೆಯೊಂದಿದೆ, ಭಾರತಕ್ಕೆ ಸಾಕಷ್ಟು ತಾಳ್ಮೆಯಿದ್ದು, ಸಂಕಷ್ಟಗಳ ಅಗ್ನಿಕುಂಡದಲ್ಲಿ ಗಮಿಸುತ್ತಾ ತನ್ನ ಸಾಂಸ್ಕೃತಿಕ ನೆಲೆಗಟ್ಟುಗಳ ಮೇಲಿನ ನ್ಯಾಯರಹಿತ ಧಾಳಿಯನ್ನೆದುರಿಸಬೇಕು. ಎಷ್ಟೇ ಅಪೂರ್ಣವೆನಿಸಿದ್ದರೂ ನಮ್ಮ ಸನಾತನ ಸಂಸ್ಕೃತಿ ಪ್ರಾಚೀನ ಕಾಲದಿಂದ ಎಷ್ಟೋ ಧಾಳಿಗಳಿಗೆ ಮಣಿಯದೇ ನಿಂತು ಜೀವಂತವಾಗಿದೆ. ಈ ವಿಶ್ವದ ಶಾಂತಿಗೂ ಭದ್ರವಾದ ಪ್ರಗತಿ ಪಥಕ್ಕೂ ಭಾರತ ಈಗಲೂ ಶಾಶ್ವತ ಕಾಣಿಕೆಯನ್ನು ನೀಡಬಲ್ಲದೆಂಬುದೇ ನನ್ನ ದೃಢ ವಿಶ್ವಾಸ.

## XXVIII

India's destiny lies not along the bloody way of the west, of which she shows signs of tiredness, but along the bloodless way of peace that comes from a simple and godly life. India is in danger of losing her soul. She cannot lose it and live. She must not therefore, lazily and helplessly say, "I cannot escape the onrush from the west". She must be strong-enough to resist it for her own sake and that of the world.

"ಪಶ್ಚಿಮ ದೇಶಗಳ ರಕ್ತಸಿಂಚಿತ ಮಾರ್ಗಗಳಲ್ಲಿ ಭಾರತದ ಭವಿಷ್ಯ ನಿರ್ಣಯವಾಗದು. ಈಗಾಗಲೇ ಈ ದಾರಿಯ ಬಗ್ಗೆ ಆ ದೇಶಗಳು ಬೇಸರಪಡುತ್ತಿವೆ. ತನ್ನ ಸರಳವಾದ ಪವಿತ್ರ ಜೀವನಾದರ್ಶಗಳಿಂದ ಬರುವ ಶಾಂತಿಯುತ ರಕ್ತರಹಿತ ಮಾರ್ಗದಿಂದಲೇ ಭಾರತ ತನ್ನ ಭವಿಷ್ಯವನ್ನು ರೂಪಿಸಿಕೊಂಡಿತು. ಈ ಘಳಿಗೆಯಲ್ಲಿ ಭಾರತ ತನ್ನ ಆತ್ಮನಾಶದ ಅಪಾಯದ ಅಂಚಿನಲ್ಲಿದೆ. ಆತ್ಮನಾಶ ಮಾಡಿಕೊಂಡು ಅದು ಜೀವಿಸಲಾರದು ನಿಸ್ಸಹಾಯಕವಾಗಿ, ಸೋಮಾರಿತನದಿಂದ "ಪಶ್ಚಿಮದ ಈ ಧಾಳಿಯಿಂದ ನಾನು ಪಾರಾಗಲಾರೆ" ಎಂದು ಹೇಳಬಾರದು. ತನ್ನ ಕ್ಷೇಮಕ್ಕಾಗಿ ಮತ್ತು ಜಗತ್ತಿನ ಕ್ಷೇಮಕ್ಕಾಗಿ ಈ ಧಾಳಿಯನ್ನು ಎದುರಿಸುವಂತಹ ಶಕ್ತಿಯುತ ರಾಷ್ಟ್ರವಾಗಿ ಭಾರತ ನಿಲ್ಲಬೇಕು".

## XXIX

I will give you a talisman. Whenever you are in doubt or when the sefl becomes too much with you apply the following test. Recall the face of the poorest and the weakest man whom you have seen and ask yourself if the step you contemplate is going to be of any use to him. Will he gain anything by it? Will it restore him to a control over his own life and destiny? In other words will it lead to swaraj for the hungry and spiritually starving millions? Then you will find your doubts and your self melting away.

ನಿಮಗೊಂದು ತಾಯತಿ ಕೊಡುತ್ತೇನೆ. ನಿಮ್ಮನ್ನು ಸಂಶಯಗಳು ಕಾಡಿದಾಗ ಅಥವಾ ಸ್ವಾರ್ಥವು ವಿಪರೀತ ಮುತ್ತಿದಾಗ ಈ ರೀತಿ ಆತ್ಮ ನಿರೀಕ್ಷೆ ಮಾಡಿಕೊಳ್ಳಿ. ನೀವು ಕಂಡಿರಬಹುದಾದ ಅತ್ಯಂತ ದರಿದ್ರನೂ ನಿಶ್ಶಕ್ತನೂ ಆದವನ ಮುಖವನ್ನು ಜ್ಞಾಪಿಸಿಕೊಳ್ಳಿ. ನೀವು ಕೈಗೊಳ್ಳಬೇಕೆಂದು ಯೋಚಿಸಿರುವ ಕಾರ್ಯ ಆತನಿಗೆ ನೆರವು ನೀಡಬಲ್ಲುದೆ ಎಂದು ಕೇಳಿಕೊಳ್ಳಿ. ಅದರಿಂದ ಅವನಿಗೆ ಲಾಭವಾದೀತೆ? ಆತನ ಬಾಳಿಗೂ ಭವಿಷ್ಯಕ್ಕೂ ಅದರಿಂದೇನಾದರೂ ಅವನಿಗೇ ನಿಯಂತ್ರಿಸುವ ಶಕ್ತಿ ಬಂದೀತೆ? ಹಸಿವಿನಿಂದ ಕಂಗೆಟ್ಟಿರುವ ಮತ್ತು ಆತ್ಮೋದ್ಧಾರದಿಂದ ವಂಚಿತರಾಗಿರುವ ಜನಕೋಟಿಯ ಸ್ವರಾಜ್ಯ ಸಾಧನೆಗೆ ನಿಮ್ಮ ಕೆಲಸ ನೆರವಾಗುತ್ತದೆಯೇ? ಎಂದು ಯೋಚಿಸಿ. ಆಗ ನಿಮ್ಮ ಸಂಶಯಗಳು ಮಾಯವಾಗುತ್ತವೆ. ಸ್ವಾರ್ಥವೂ ಕರಗಿ ಹೋಗುತ್ತದೆ.

## XXX

All societoy is held together by nonviolence, even as the earth is held in her position by gravitation. But when the law of gravitation was discovered, the discovery yielded results of which our ancestors had no knowledge. Even son when society is deliberately constructed in accordance with the law of non-violence, its structure will be different in material particulars from what it is today. But I cannot say in advance what

the government based on nonviolence will be like. What is happening today is disregard of the law of non-violence and enthronement of violence as if is was an eternal law.

ಗುರುತ್ವಾಕರ್ಷಣೆಯ ಶಕ್ತಿಯಿಂದ ಭೂಮಿ ತನ್ನ ಪಥದಲ್ಲಿ ಸ್ಥಿರವಾಗಿರುವಂತೆಯೇ ಅಹಿಂಸೆಯ ಪ್ರಭಾವದಿಂದ ಮಾನವ ಸಮಾಜ ಒಟ್ಟುಗೂಡಿದೆ. ಆದರೆ ಗುರುತ್ವಾಕರ್ಷಣೆಯ ಪರಮ ನಿಯಮಗಳನ್ನು ಸಂಶೋಧಿಸಿದ ನಂತರ ಯಾವ ಪರಿಣಾಮವಾಯಿತೋ ಅದರ ಕಲ್ಪನೆ ನಮ್ಮ ಪೂರ್ವಿಕರಿಗೆ ಇರಲಿಲ್ಲ. ಹಾಗೆಯೇ ಅಹಿಂಸೆಯ ನಿಯಮಗಳನ್ನು ಉದ್ದೇಶಪೂರ್ವಕವಾಗಿ ಅಂಗೀಕರಿಸಿ ರಚಿಸಿಕೊಂಡ ಮಾನವಸಮಾಜ ಇಂದಿನ ಸಮಾಜರಚನೆಗಿಂತ ಎಲ್ಲ ರೀತಿಯ ವಾಸ್ತವ ವಿವರಗಳಲ್ಲಿಯೂ ಭಿನ್ನವಾಗಿರುವುದ ಸಹಜ. ಆದರೆ ಅಹಿಂಸಾತತ್ವದ ತಳಹದಿಯ ಮೇಲೆ ನಿರ್ಮಿಸುವ ಸರ್ಕಾರದ ವ್ಯವಸ್ಥೆ ಹೇಗಿದ್ದೀತೆಂದು ಮುಂಚೆಯೇ ನಾನು ವಿವರಿಸಲಾರೆ. ಅಹಿಂಸೆಯನ್ನು ಕಡೆಗಣಿಸಿ ಹಿಂಸಾಚಾರವೇ ಶಾಶ್ವತ ಶಾಸನ ಶಕ್ತಿಯೆಂದು ತಿಳಿದು ಅದನ್ನು ಅಗ್ರಪೀಠದಲ್ಲಿ ಸ್ಥಾಪಿಸಿರುವುದರಿಂದಲೇ ಇಂದಿನ ಎಲ್ಲ ಅನಿಷ್ಠಗಳಿಗೆ ಕಾರಣವಾಗಿದೆ.

## XXXI

Society based on non-violence can only consist of groups settled in villages in which volentary co-operation is the condition of degnified and peaceful existence.

ಗೌರವಯುತ ಶಾಂತ ಪರಿಸ್ಥಿತಿಗೆ ಪರಿಸರ ನಿರ್ಮಾಣ ಮಾಡುವ ಸ್ವಯಂ ಪ್ರೇರಿತ ಸಹಕಾರ ನೆಲೆಸಿರುವ ಗ್ರಾಮ ಜೀವನದ ಸಮೂಹಗಳಲ್ಲಿ ಮಾತ್ರವೇ ಅಹಿಂಸಾ ತಳಹದಿಯ ಸಮಾಜ ರಚಿತವಾಗಬಲ್ಲದು.

## XXXII

A government cannot succeed in becoming entirely non-violent because if represents all the people. I do not today conceive of such a golden age. But I do believe to the possiblity of a predominatly nonviolent society and I am working for it.

ಸಮಸ್ತ ಪ್ರಜೆಗಳ ಪ್ರತಿನಿಧಿಯಾಗಿರುವುದರಿಂದ ರಾಜ್ಯಶಕ್ತಿ ಸಂಪೂರ್ಣ ಅಹಿಂಸೆಯನ್ನನುಸರಿಸುವಲ್ಲಿ ಸಫಲವಾಗುವುದಿಲ್ಲ. ಅಂಥ ಸುವರ್ಣಯುಗದ ಕಲ್ಪನೆಯನ್ನು ನಾನೀಗ ಮಾಡುತ್ತಿಲ್ಲ. ಆದರೆ ಪ್ರಧಾನವಾಗಿ ಅಹಿಂಸಾತ್ಮಕವಾಗಿರುವ ಸಮಾಜವನ್ನು ಸೃಷ್ಟಿಸುವ ಸಾಧ್ಯತೆ ಉಂಟೆಂದು ನಾನು ನಂಬಿದ್ದೇನೆ. ಆ ಆದರ್ಶಕ್ಕಾಗಿಯೇ ನಾನು ಸತತ ಪ್ರಯತ್ನಶೀಲನಾಗಿದ್ದೇನೆ.

## XXXIII

Holding the view that, without the recognition of nonviolence on a national scale, there is no such thing as a constitutional or democratic governement. I devote my energy to the propogation of nonviolence as the law of our life-individual, social, political, national and internation.

ರಾಷ್ಟ್ರೀಯ ಸ್ತರದಲ್ಲಿ ಅಹಿಂಸಾಶಕ್ತಿಯನ್ನು ಅಂಗೀಕರಿಸಿದಲ್ಲದೆ ಯಾವ ರಾಜ್ಯಾಂಗಬದ್ಧ ಅಥವಾ ಪ್ರಜಾಪ್ರಭುತ್ವ ತತ್ವದ ಸರ್ಕಾರವೂ ಸಾಧ್ಯವಿಲ್ಲ ಎಂದು ನನ್ನ ದೃಢವಿಶ್ವಾಸ. ಆದ್ದರಿಂದ ವ್ಯಕ್ತಿಗತ, ಸಾಮಾಜಿಕ, ರಾಜಕೀಯ, ರಾಷ್ಟ್ರೀಯ ಮತ್ತು ಅಂತರ್ರಾಷ್ಟ್ರೀಯ ಮಟ್ಟಗಳಲ್ಲೆಲ್ಲ ಅಹಿಂಸಾಧರ್ಮವೇ ಜೀವನ ಶಾಸನವೆಂಬುದನ್ನು ಪ್ರಸಾರ ಮಾಡಲು ನನ್ನೆಲ್ಲ ಶಕ್ತಿಸಾಮರ್ಥ್ಯಗಳನ್ನೂ ವಿನಿಯೋಗಿಸುತ್ತಿದ್ದೇನೆ.

XXXIV

We have not had patience enough to wait and apply ourselves wholeheartedly to the spread of nonviolence among the people as a means for political ends.

ಈವರೆವಿಗೂ ರಾಜಕೀಯ ಗುರಿಗಳಿಗೆ ಅಹಿಂಸಾ ಧರ್ಮವೇ ಶ್ರೇಷ್ಠ ಸಾಧನವೆಂಬುದನ್ನು ಮನಃಪೂರ್ವಕವಾಗಿ ಅನ್ವಯಮಾಡುತ್ತಾ ಜನತೆಯ ಮಧ್ಯೆ ಪ್ರತಿಪಾದಿಸಿ ಹರಡುವ ಕಾರ್ಯವನ್ನು ನಾವು ಶ್ರದ್ಧೆಯಿಂದ ನೆರವೇರಿಸಿ ಪರಿಣಾಮಗಳನ್ನು ನಿರೀಕ್ಷಿಸುವ ತಾಳ್ಮೆಯನ್ನು ಮೈಗೂಡಿಸಿಕೊಂಡೇ ಇಲ್ಲ.

XXXV

In the ideal non-violent state, there is no centralised political power because there is no state as understood today. But the idea is never fully realised in life. Hence the classical statement of Thoreau that "that government is best which governs least".

ನಾವೀಗ ತಿಳಿದಿರುವ ರೀತಿಯ ರಾಜ್ಯ ವ್ಯವಸ್ಥೆಯಲ್ಲಿರುವಂತೆ ಕೇಂದ್ರಿತ ರಾಜಕೀಯ ಶಕ್ತಿಯು ಆದರ್ಶ ಅಹಿಂಸಾತ್ಮಕ ರಾಜ್ಯ ವ್ಯವಸ್ಥೆಯಲ್ಲಿ ಇರುವುದೇ ಇಲ್ಲ. ಅದರಿಂದಾಗಿ ರಾಜಕೀಯ ಸರ್ವಾಧಿಕಾರ ಇರುವುದಿಲ್ಲ. ಆದರೆ ಈ ಆದರ್ಶ ಸ್ಥಿತಿಯನ್ನು ಜೀವನದಲ್ಲಿ ಪೂರ್ಣವಾಗಿ ಸಾಧಿಸುವುದಾಗದು. ಆದ್ದರಿಂದ ಥೋರೋವಿನ ಪ್ರಸಿದ್ಧ ಹೇಳಿಕೆಯಂತೆ "ಯಾವ ಸರ್ಕಾರ ಅತ್ಯಂತ ಕನಿಷ್ಠ ಅಧಿಕಾರ ಚಲಾಯಿಸುವುದೋ ಆ ಸರ್ಕಾರವೇ ಅತ್ಯಂತ ಶ್ರೇಷ್ಠವಾದುದು".

XXXVI

While admitting that man actually lives by habit. I hold that it is better for him to live by the excercise of his iwll. I also believe that men are capable of developing their will to an extent that will reduce exploitation to a minimum.

ಅಭ್ಯಾಸ ಬಲದಿಂದಲೇ ಮನುಷ್ಯ ವಾಸ್ತವವಾಗಿ ಬದುಕುವನೆಂದು ನಾನು ಒಪ್ಪಿದರೂ ಅವನು ತನ್ನ ಇಚ್ಛಾಬಲವನ್ನು ಬಳಸಿಕೊಂಡು ಬಾಳುವುದು ಹೆಚ್ಚು ಶ್ರೇಯಸ್ಕರವೆಂದು ನನ್ನ ನಂಬಿಕೆ. ಹಾಗೆಯೇ ಇಚ್ಛಾಶಕ್ತಿಯನ್ನು ವೃದ್ಧಿಗೊಳಿಸಿಕೊಂಡು ಶೋಷಣೆಯ ಪ್ರವೃತ್ತಿಗಳನ್ನು ಅತ್ಯಂತ ಕನಿಷ್ಠ ಮಟ್ಟಕ್ಕೆ ಇಳಿಸುವ ಸಾಮರ್ಥ್ಯವನ್ನು ಮಾನವರು ಪಡೆದಿದ್ದಾರೆ ಎಂದೂ ನಂಬುತ್ತೇನೆ.

## XXXVII

Swaraj of a people means the sum total of the swaraj (self rule) of individuals. And such swaraj comes only from performance by individuals of the duty as citizens. In it no one thinks only of his rights. They come when they are needed, for better performance of one's duties.

ವ್ಯಕ್ತಿಗಳ ಸ್ವರಾಜ್ಯದ ಮೊತ್ತವೇ ಜನತೆಯ ಸ್ವರಾಜ್ಯ ಸ್ವರಾಜ್ಯವೆಂದರೆ ಆತ್ಮ ಸಂಯಮ. ಪ್ರಜೆಗಳಾಗಿ ತಮ್ಮ ಕರ್ತವ್ಯ ನಿಷ್ಠೆಗಳನ್ನು ಪರಿಪಾಲಿಸುವುದರಿಂದಲೇ ಅಂಥ ಸ್ವರಾಜ್ಯ ಲಭ್ಯವಾದೀತು. ಅದರಲ್ಲಿ ಯಾರೂ ತಮ್ಮ ಹಕ್ಕುಗಳನ್ನು ಮಾತ್ರವೇ ಯೋಚಿಸುವುದಿಲ್ಲ. ಪ್ರಜೆಯ ಕರ್ತವ್ಯಗಳನ್ನು ಹೆಚ್ಚು ಚೆನ್ನಾಗಿ ನಿರ್ವಹಿಸುತ್ತಾರೆ. ಅದರಿಂದ ಹಕ್ಕುಗಳು ತಾವಾಗಿಯೇ ಲಭ್ಯವಾಗುತ್ತವೆ.

## XXXVIII

Centralization as a system is inconsistant with nonviolent structure of society.. Ruraily organised India will run the risk of foreign invasion less than centralised and urbanised India with all its military, naval and airforces".

ಇಂದಿನ ವ್ಯವಸ್ಥಿತ ನಾಗರಿಕತೆ ಎನ್ನುವ ಸಮಾಜ ವ್ಯವಸ್ಥೆ ಅಹಿಂಸಾತ್ಮಕ ರಚನೆಗೆ ವಿರುದ್ಧವಾಗಿಯೇ ಇದೆ. ಗ್ರಾಮಗಳ ಮೂಲಕ ವ್ಯವಸ್ಥಿತವಾದ ವಿಕೇಂದ್ರಿತ ಭಾರತದಲ್ಲಿ ನಗರಗಳ ಭಾರತದಲ್ಲಿ ನೆಲೆಯಾಗಿರುವ ಸೈನ್ಯ, ನೌಕಾದಳ ಮತ್ತು ವಾಯುದಳಗಳ ಕಾರಣವಾಗಿ ಏರ್ಪಡುವ ವಿದೇಶೀ ಆಕ್ರಮಣದ ಭಯ ಬಹಳವಾಗಿ ಕಡಮೆಯಾಗಿರುತ್ತದೆ.

# ಪರಿಶಿಷ್ಟ

Sources for quotes ಮೂಲದ ಆಧಾರಗಳು

REFERENCES

| | | |
|---|---|---|
| H | : | Harijan |
| YI | : | Young India |
| B.C | : | Bombay Chonicle |
| I.M | : | India of my Dreams |
| H.S. | : | Hind Swaraj |
| P.N. | : | Politics and Non Violence |
| L.N. | : | Letter to Nehru 1945 |
| Y.M. | : | From Yervada Mandir |
| M.G. | : | Mind of Mahatma Gandhi |

NOS.

| | | |
|---|---|---|
| I | : | Y.I. 9-1-1925 |
| II | : | H. 2-1-1937 |
| III | : | Y.I. 26-3-1931 |
| IV | : | H. 28 - 1946 |
| V | : | Y.I. 16-4-1931 |
| VI | : | Y.I. 26-3-1931 |
| VII | : | Y.I. 28-7-1921 |
| VIII | : | B.C. 12-1-1945 |
| IX | : | I.M.- 26P |
| X | : | H. 27-5-1939 |
| XI | : | Y.I. 17-4-1924 |
| XII | : | H. 27-5-1939 |
| XIII | : | H. 1-2-1943 |
| XIV | : | Y.I 7-11-1929 |

| | | |
|---|---|---|
| XV | : | I.M.P. 20 |
| XVI | : | H.S. Ch. 23 |
| XVII | : | H. 26-2-1937 |
| XVIII | : | L.N. 1945 |
| XIX | : | P.N. P. 15 |
| XX | : | H. 29-8-1926 |
| XXI | : | Y.I. 24-9-1920 |
| XXII | : | H. 20-1-1940 |
| XXIII | : | Y.M. 1931. Y.I |
| XXV | : | H. 29-6-1935 |
| XXVI | : | Y.M. 1930 |
| XXVII | : | Y.I. 11-8-1927 |
| XXVIII | : | Y.I. 7-10-1926 |
| XXIX | : | M.H. Ch.V |
| XXX | : | H. 11-1-1939 |
| XXXI | : | H. 13-1-1940 |
| XXXII | : | M.G. Ch. VI |
| XXXIV | : | Y.I. 2-1-1930 |
| XXXV | : | M.G.V. 26 |
| XXXVII | : | M.G. Ch. V 16 |
| XXXVIII | : | H. 30-12-1934 |

# ಗಾಂಧೀಜಿ ಅವರ ಜೀವನ ಘಟನಾವಳಿಗಳು

| | |
|---|---|
| ಪೋರಬಂದರದಲ್ಲಿ ಜನನ | 2.10.1869 |
| ಕಸ್ತೂರ್‌ಬಾರೊಂದಿಗೆ ವಿವಾಹ | 1881 |
| ಮೆಟ್ರಿಕ್ಯುಲೇಶನ್ ಉತ್ತೀರ್ಣರಾದದ್ದು | 1887 |
| ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಪ್ರಯಾಣ | 1888 |
| ಬ್ಯಾರಿಸ್ಟರರಾಗಿ ದಾಖಲಾತಿ | 1891 |
| ಮರಳಿ ಭಾರತಕ್ಕೆ | 1891 |
| ದಕ್ಷಿಣ ಆಫ್ರಿಕಾಕ್ಕೆ ಹಡಗಿನಲ್ಲಿ ಪ್ರಯಾಣ | 1893 |
| ಭಾರತ ಸಂದರ್ಶನ | 1896 |
| | 1901 ಮತ್ತು |
| ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಂಡಿದ್ದು | 1901 |
| ಇಂಡಿಯನ್ ಒಪಿನಿಯನ್ ಪತ್ರಿಕೆಯ ಪ್ರಾರಂಭ | 1903 |
| ಫೀನಿಕ್ಸ್ ಆಶ್ರಮ ಸ್ಥಾಪನೆ | 1904 |
| ಬೋರ್ ಯುದ್ಧ ಮತ್ತು ಜೂಲು ದಂಗೆಯಲ್ಲಿ | |
| ಇಂಡಿಯನ್ ಅಂಬುಲೆನ್ಸ್ ಕೋರ್ ನೇತೃತ್ವ | 1899 ಮತ್ತು |
| | 1906 |
| ಬ್ರಹ್ಮಚರ್ಯ ವ್ರತ ಸ್ವೀಕಾರ | 1906 |
| ಇಂಗ್ಲೆಂಡಿಗೆ ಪ್ರಯಾಣ | 1906 ಮತ್ತು |
| | 1909 |
| ದಕ್ಷಿಣ ಆಫ್ರಿಕಾದಲ್ಲಿ ಪ್ರಥಮ ಜೈಲುವಾಸ | 1908 |
| ಟಾಲ್‌ಸ್ಟಾಯ್ ಆಶ್ರಮ ಸ್ಥಾಪನೆ | 1910 |
| ದಕ್ಷಿಣ ಆಫ್ರಿಕಾದಲ್ಲಿ ಚಾರಿತ್ರಿಕ ಸತ್ಯಾಗ್ರಹ ಆರಂಭ | 1913 |
| ಭಾರತಕ್ಕೆ ಆಗಮನ | 1915 |

| | |
|---|---|
| ಸಾಬರಮತಿ ಆಶ್ರಮ ಸ್ಥಾಪನೆ | 1915 |
| ಖೇಡಾದಲ್ಲಿ ಕರನಿರಾಕರಣೆ ಚಳುವಳಿ | 1918 |
| ಜಲಿಯನ್ ವಾಲಾಬಾಗ್ ಹತ್ಯಾಕಾಂಡ | 1919 |
| ಯಂಗ್ ಇಂಡಿಯಾ, ನವಜೀವನ ಪತ್ರಿಕೆಗಳ ಆರಂಭ | 1919 |
| ಅಸಹಕಾರ ಆಂದೋಲನ | 1921 |
| ಭಾರತದಲ್ಲಿ ಪ್ರಥಮ ಜೈಲುವಾಸ | 1922 |
| ಖಾದಿ ಪ್ರವಾಸ | 1927 |
| ಉಪ್ಪಿನ ಸತ್ಯಾಗ್ರಹ ಮತ್ತು ದಾಂಡೀಯಾತ್ರೆ | 1930 |
| ಯೂರೋಪು ಸಂದರ್ಶನ ಮತ್ತು ದುಂಡು ಮೇಜಿನ ಪರಿಷತ್ತು | 1931 |
| ಸೇವಾಗ್ರಾಮ ಆಶ್ರಮ ಸ್ಥಾಪನೆ | 1933 |
| ಹರಿಜನ ಯಾತ್ರೆ | 1933 |
| ಹರಿಜನ ಸಾಪ್ತಾಹಿಕ ಪ್ರಾರಂಭ | 1933 |
| ನಯೀ ತಾಲೀಂ ಶಿಕ್ಷಣ ಪದ್ಧತಿ ಪ್ರಾರಂಭ | 1937 |
| "ಭಾರತ ಬಿಟ್ಟು ತೊಲಗಿ" ಚಳುವಳಿ | 1942 |
| ಕೊನೆಯ ಬಾರಿಗೆ ಆಗಾಖಾನ್ ಅರಮನೆಯಲ್ಲಿ ಸೆರೆವಾಸ | 1942–44 |
| ಹಂತಕನ ಗುಂಡೇಟಿಗೆ ಬಲಿ | 30–1–1948 |

# ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು

| | | |
|---|---|---|
| 1. | ಆರೋಗ್ಯ ರಹಸ್ಯ | 10–00 |
| 2. | ಕರ್ನಾಟಕದಲ್ಲಿ ಗಾಂಧೀ | 5–00 |
| 3. | ರಾಮನಾಮ | 6–00 |
| 4. | ಗಾಂಧೀ ಬಳಗದ ವಿದೇಶಿಯರು | 40–00 |
| 5. | ಆರೋಗ್ಯ | 8–00 |
| 6. | ಪ್ರಾರ್ಥನೆ | 8–00 |
| 7. | ಸತ್ಯಾಗ್ರಹ | 8–00 |
| 8. | ಮಹಿಳೆಯರಿಗಾಗಿ | 8–00 |
| 9. | ಪಂಚಾಯತ್ ರಾಜ್ | 12–00 |
| 10. | ಆದರ್ಶಗಳು | 12–00 |
| 11. | ನಮ್ಮ ಗಾಂಧೀ ತಾತ | 25–00 |
| 12. | ದೇವನಗರಿಯಲ್ಲಿ ಗಾಂಧೀ ಧ್ವನಿ | 2–00 |
| 13. | ನಮ್ಮ ಗಾಂಧೀ ತಾತ | 15–00 |
| 14. | ಹೋರಾಟ ಶ್ರೀ | 40–00 |
| 15. | ಮಹಾತ್ಮ ಗಾಂಧೀಜಿಯವರ ಮೈಲಿಗಲ್ಲು | 3–00 |
| 16. | ಗಾಂಧೀಜಿ ಜೀವನ ಚರಿತ್ರೆ | 25–00 |
| 17. | ಕುವೆಂಪು ಕಂಡ ಗಾಂಧೀ | 25–00 |
| 18. | ಉಪ್ಪಿನ ಸತ್ಯಾಗ್ರಹ | 5–00 |
| 19. | ಹಿಂದ್ ಸ್ವರಾಜ್ | 50–00 |
| 20. | ಗಾಂಧೀ ಮತ್ತು ಆಧ್ಯಾತ್ಮಿಕ ಜೀವನ | 25–00 |
| 21. | ನನ್ನ ಕನಸಿನ ಭಾರತ | 30–00 |
| 22. | ಹಿಂದೂ ಧರ್ಮ | 25–00 |
| 23. | ಮಹಿಳೆಯರು | 30–00 |
| 24. | ಸ್ವಾತಂತ್ರ್ಯ | 25–00 |
| 25. | ಅಸ್ಪೃಶ್ಯತೆ | 30–00 |
| 26. | ಒಳ್ಳೆಯ ಜೀವನ | 25–00 |
| 27. | ಪ್ರಾರ್ಥನೆ | 25–00 |
| 28. | ಗಾಂಧೀ ಮತ್ತು ಕರ್ನಾಟಕ | 200–00 |
| 29. | ಸತ್ಯ | 30–00 |
| 30. | ವಿದ್ಯಾರ್ಥಿಗಳಿಗಾಗಿ | 30–00 |
| 31. | ಸರ್ವೋದಯ | 30–00 |

| | | |
|---|---|---|
| 32. | ಖಾದಿ ಗ್ರಾಮೋದ್ಯೋಗ | 30–00 |
| 33. | ನನ್ನ ಬಾಲ್ಯದ ನೆನಪುಗಳು | 30–00 |
| 34. | ಗ್ರಾಮರಾಜ್ಯ ಆಡಳಿತ | 5–00 |
| 35. | ನನ್ನ ಕನಸಿನ ಸ್ವರಾಜ್ಯ | 5–00 |
| 36. | ಗಾಂಧೀ ಮತ್ತು ಹಾಸ್ಯ | 20–00 |
| 37. | ನನ್ನ ಆದರ್ಶಗ್ರಾಮ | 5–00 |
| 38. | ಮಹಾತ್ಮ ಗಾಂಧೀ ವಿಚಾರಗಳು ಹಾಗೂ ವ್ಯವಸ್ಥಾಪನ ಪದ್ಧತಿ | 48–00 |
| 39. | ಸತ್ಯಾಗ್ರಹಿ | 40–00 |
| 40. | ಗ್ರಾಮದಾನ ಗ್ರಾಮ ಸ್ವರಾಜ್ಯ | 25–00 |
| 41. | ಗಾಂಧೀಜಿಯವರ ಪ್ರಾತ: ಸಾಯಂ ಪ್ರಾರ್ಥನೆ ಮತ್ತು ಭಜನೆ | |
| 42. | ಉಪ್ಪಿನ ಸತ್ಯಾಗ್ರಹ ಮತ್ತು ಮೈಲಾರ ಮಹಾದೇವ | 5–00 |
| 43. | ಸತ್ಯಾಗ್ರಹ | 5–00 |
| 44. | ಹಿಂದ್ ಸ್ವರಾಜ್ | 5–00 |
| 45. | ಆರೋಗ್ಯ | 5–00 |
| 46. | ಮಹಾತ್ಮ ಗಾಂಧಿ ಪ್ರಸ್ತುತತೆ | 10–00 |
| 47. | ಬಹುರೂಪಿ ಗಾಂಧಿ | 10–00 |
| 48. | ನಂದಿ ಗಿರಿಧಾಮದಲ್ಲಿ ಮಹಾತ್ಮ ಗಾಂಧಿ | 30–00 |
| 49. | ಕೃತಯುಗಿ ವಿನೋಬಾ ಭಾವೆ | 15–00 |
| 50. | ಮೋಹನ ತರಂಗ | 40–00 |
| 51. | ನಮ್ಮ ಗಾಂಧಿ ತಾತ | 5–00 |
| 52. | ಗೀತಾ ಪ್ರವಚನ | 80–00 |
| 53. | ಜೆ.ಪಿ. ಜೀವನ ಹಾದಿ | 45–00 |
| 54. | ಗಣ್ಯರು ಕಂಡಂತೆ ಗಾಂಧಿ | 20.0 |
| 55. | ಗೀತಾಮಾತೆ | 80.00 |
| 56. | Temple & Mosque | 10–00 |
| 57. | Rastrapita Mahatma Gandhi | 25–00 |
| 58. | Swarajya of Dreams | 5–00 |
| 59. | Gandhi My Grand Father | 5–00 |
| 60. | Grand Pa Gandhi | 5–00 |
| 61. | Relevance of Gandhi | 20–00 |
| 62. | Vinoba age of the sage | 20.00 |

# ಕರ್ನಾಟಕದಲ್ಲಿ ಗಾಂಧೀಜಿ ಭೇಟಿ ನೀಡಿದ ಸ್ಥಳಗಳು

- ಬೆಂಗಳೂರು — ದಿ. 08–05–1915
- ಬೆಳಗಾವಿ — ದಿ. 27–04–1916 ರಿಂದ ದಿ. 01–05–1916 ರವರೆಗೆ
- ಬಿಜಾಪುರ — ದಿ. 05–05–1918 ರಿಂದ ದಿ. 06–05–1918 ರವರೆಗೆ
- ಕಾಸರಗೋಡು — ದಿ. 19–08–1920
- ಮಂಗಳೂರು — ದಿ. 20–08–1920
- ಬೆಂಗಳೂರು — ದಿ. 21–08–1920
- ನಿಪ್ಪಾಣಿ, ಚಿಕ್ಕೋಡಿ, ಹುಕ್ಕೇರಿ ಸಂಕೇಶ್ವರ, ಬೆಳಗಾವಿ — ದಿ. 08–11–1920
- ಬೆಳಗಾವಿ ಶಹಾಪುರ ಖಾನಾಪುರ, ನಂದಗಢ ಹಳ್ಯಾಳ — ದಿ. 09–11–1920
- ಧಾರವಾಡ — ದಿ. 10–11–1920
- ಹುಬ್ಬಳ್ಳಿ, ಗದಗ — ದಿ. 11–11–1920
- ಸಾಂಗಲಿ — ದಿ. 12–11–1920
- ಬಾಗಲಕೋಟೆ — ದಿ. 27–05–1921
- ಬಿಜಾಪುರ, ಸೊಲ್ಲಾಪುರ — ದಿ. 28–05–1921
- ಬಳ್ಳಾರಿ — ದಿ. 30–05–1921
- ಬೆಳಗಾವಿ — ದಿ. 21–12–1924 ರಿಂದ ದಿ. 30–12–1924 ರವರೆಗೆ
- ಗುಲ್ಬರ್ಗಾ — ದಿ. 22–02–1927
- ನಿಪ್ಪಾಣಿ — ದಿ. 28–03–1927 ರಿಂದ ದಿ. 30–12–1924 ರವರೆಗೆ

- ಬೆಳಗಾವಿ — ದಿ. 19-04-1027 ರಿಂದ ದಿ. 20-004-1927ರವರೆಗೆ
- ಬೆಂಗಳೂರು — ದಿ. 06-06-1927 ರಿಂದ ದಿ. 13-07-1927 ರವರೆಗೆ
- ತುಮಕೂರು — ದಿ. 14-07-1927
- ತುಮಕೂರು, ಮಧುಗಿರಿ — ದಿ. 15-07-1927
- ತುಮಕೂರು — ದಿ. 16-07-1927
- ಬೆಂಗಳೂರು — ದಿ. 17-07-1927
- ಬೆಂಗಳೂರು — ದಿ. 18-07-1927
- ಕೃಷ್ಣರಾಜಸಾಗರ, ಯಡತೊರೆ ಶ್ರೀರಂಗಪಟ್ಟಣ — ದಿ. 19-07-1927
- ಮೈಸೂರು — ದಿ. 22-07-1927
- ಬೆಂಗಳೂರು — ದಿ. 12-07-1927 ರಿಂದ ದಿ. 30-07-1927 ರವರೆಗೆ
- ಕ್ಲೋಸ್‌ಪೇಟೆ (ರಾಮನಗರ) — ದಿ. 31-07-1927
- ಕಾನಕನಹಳ್ಳಿ (ಕನಕಪುರ)
- ಬೆಂಗಳೂರು — ದಿ. 01-08-1927
- ಅರಸೀಕರೆ, ಹಾಸನ — ದಿ. 02-08-1927
- ಹಾಸನ — ದಿ. 03-08-1927
- ಹಾಸನ, ಹೊಳೆನರಸೀಪುರ — ದಿ. 04-08-1927
- ಬೆಂಗಳೂರು — ದಿ. 05-08-1927 ರಿಂದ ದಿ. 11-08-1927 ರವರೆಗೆ
- ದಾವಣಗೆರೆ — ದಿ. 12-08-1927
- ಹರಿಹರ, ಹೊನ್ನಾಳಿ ಮಲೆಬೆನ್ನೂರು — ದಿ. 13-08-1927
- ಶಿವಮೊಗ್ಗ — ದಿ. 15-08-1927

- ಆಯನೂರು, ಕುಂಸಿ, ಸಾಗರ ಶಿವಮೊಗ್ಗ, ತೀರ್ಥಹಳ್ಳಿ ಮಂದಗದ್ದೆ, ರಾಜನೂರು — ದಿ. 17-08-1927
- ಶಿವಮೊಗ್ಗ — ದಿ. 15-08-1927
- ಭದ್ರಾವತಿ, ತರೀಕೆರೆ — ದಿ. 18-08-1927
- ಬೀರೂರು, ಕಡೂರು
- ಚಿಕ್ಕಮಗಳೂರು — ದಿ. 19-08-1927
- ಬೇಲೂರು, ಹಳೇಬೀಡು — ದಿ. 20-08-1927
- ಅರಸೀಕರೆ
- ತಿಪಟೂರು — ದಿ. 21-08-1927
- ಬೆಂಗಳೂರು — ದಿ. 22-08-1927
- ಬೆಂಗಳೂರು — ದಿ. 23-08-1927
- ಹೊಸೂರು, ಸೂಳಗಿರಿ ಕೃಷ್ಣಗಿರಿ — ದಿ. 24-08-1927
- ಬೆಂಗಳೂರು — ದಿ. 25-08-1927 ರಿಂದ ದಿ. 30-08-1927 ರವರೆಗೆ
- ಹಿಂದೂಪುರ, ವಿಧುರಾಶ್ವಥ ಗೌರಿಬಿದನೂರು ದೊಡ್ಡಬಳ್ಳಾಪುರ, ತುಮಕೂರು ತ್ಯಾಮಗೊಂಡ್ಲು, ನೆಲಮಂಗಲ ಬೆಂಗಳೂರು, ಮೈಸೂರು — ದಿ. 04-01-1934
- ತಗಡೂರು, ಬದನವಾಳ ನಂಜನಗೂಡು, ಮೈಸೂರು — ದಿ. 05-01-1934
- ಮಂಡ್ಯ, ರಾಮನಗರ ಕನಕಪುರ, ಬಿಡದಿ, ಕೆಂಗೇರಿ — ದಿ. 06-01-1934
- ಬೆಂಗಳೂರು — ದಿ. 07-01-1934 ರಿಂದ ದಿ. 09-01-1934 ರವರೆಗೆ

- ಪೊನ್ನಂಪೇಟೆ, ಹುದಿಕೇರಿ ದಿ. 22-02-1934
- ವಿರಾಜಪೇಟೆ, ಬೆಳ್ಳೂರು ದಿ. 23-02-1934
- ಸೋಮವಾರ ಪೇಟೆ
- ಗುಂಡುಕಟ್ಟೆ
- ಮಡಿಕೇರಿ, ಸಂಪಾಜೆ, ಸುಳ್ಯ ದಿ. 24-02-1934
- ಪುತ್ತೂರು, ಉಪ್ಪಿನಂಗಡಿ
- ವಿಠಲಗಬ್ಬ, ಕಲ್ಲಡ್ಕ, ಪಾಣೆ
- ಮಂಗಳೂರು, ಬಂಟ್ವಾಳ
- ಮಂಗಳೂರು
- ಮಂಗಳೂರು, ಗುರುಪುರ, ಬಜ್ಪೆ ದಿ. 25-02-1934
  ಯಳ್ಳೂರು, ಕಟೀಲು, ಕಿನ್ನಗೋಳಿ
  ಮೂಲ್ಕಿ, ಪಡುಬಿದ್ರಿ, ಕಾಟಪಾಡಿ
  ಗುರುಪುರ, ಉದಯಪುರ
  ಉಡುಪಿ, ಬ್ರಹ್ಮಾವರ, ಸಿದ್ದಾಪುರ
- ಕುಂದಾಪುರ ದಿ. 26-02-1934
- ಕುಂದಾಪುರ, ಭಟ್ಕಳ ದಿ. 27-02-1934
  ಹೊನ್ನಾವರ, ಕಾರವಾರ
- ಕಾರವಾರ, ಕುಮುಟಾ, ಅಂಕೋಲ ದಿ. 28-02-1934
  ಚಂದಿಯಾ, ಶಿರಸಿ
- ಸಿರಸಿ, ಸಿದ್ದಾಪುರ, ದಾಸನಕೊಪ್ಪ ದಿ. 01-03-1934
  ಇಸಲೂರು, ಏಕಾಂಬಿ, ಆಲೂರು
  ಬ್ಯಾಡಗಿ, ಮೋಟೆಬೆನ್ನೂರು
- ಹಾವೇರಿ, ರಾಣೆಬೆನ್ನೂರು, ಹರಿಹರ ದಿ. 02-03-1934
  ದಾವಣಗೆರೆ, ಹರಪನಹಳ್ಳಿ, ಕೊಟ್ಟೂರು
  ಕೂಡ್ಲಿಗೆ, ದುಗ್ಗಾವತಿ, ಕಣಿವೆಹಳ್ಳಿ
  ಸೊಂಡೂರು
- ಸೊಂಡೂರು, ಬಳ್ಳಾರಿ, ಹೊಸಪೇಟೆ ದಿ. 03-03-1934
  ಭಾವಾಪುರ, ಗದಗ, ಜಕ್ಕಲಿ, ಹುಬ್ಬಳ್ಳಿ

- ಹುಬ್ಬಳ್ಳಿ, ಧಾರವಾಡ, ಅಮ್ಮಿನಭಾವಿ ಹಿರೇಉಳ್ಳಗೇರಿ, ಬೈಲಹೊಂಗಲ ಉಪ್ಪಿನ, ಬೆಟಗೇರಿ, ಸೌಂದತ್ತಿ ಸಂಪಗಾಂವ್, ಹೊಸೂರು, ಬೆಳಗಾವಿ — ದಿ. 04-03-1934
- ಬೆಳಗಾವಿ — ದಿ. 05-03-1934
- ಬೆಳಗಾವಿ — ದಿ. 06-03-1934
- ಬೆಳಗಾವಿ, ಯಮಕನಮರಡಿ ಹುಕ್ಕೇರಿ, ಗೋಕಾಕ, ಸಂಕೇಶ್ವರ ನವಲೀಹಾಳ, ಚಿಕ್ಕೋಡಿ, ಅಂಕಲಿ ಶೆಡಬಾಳ, ಬನಹಟ್ಟಿ, ಅಥಣಿ ಬಿಜಾಪುರ, ತಿಕೋಟ, ತೊರವಿ ಇಳಕಲ್ — ದಿ. 07-03-1934
- ನಂದಿ ಬೆಟ್ಟ — 10-05-1936 ರಿಂದ 30-05-1936 ರವರೆಗೆ
- ಚಿಕ್ಕಬಳ್ಳಾಪುರ, ಚಿಂತಾಮಣಿ ಕೋಲಾರ, ಬಂಗಾರಪೇಟೆ, ಕೆ.ಜಿ.ಎಫ್ — 31-05-1936
- ಬೆಂಗಳೂರು — 01-06-1936 ರಿಂದ 12-06-1936 ರವರೆಗೆ
- ಬೆಳಗಾವಿ ಜಿಲ್ಲೆಯ ಹುದಲಿ — 16-04-1936 ರಿಂದ 21-04-1937 ರವರೆಗೆ

## ಏಕಾದಶ ವ್ರತಗಳು

| | |
|---|---|
| ಸತ್ಯ | Truth |
| ಅಹಿಂಸೆ | Ahimsa or Love |
| ಅಸ್ತೇಯ (ಕದಿಯದಿರುವುದು) | Non-Stealing |
| ಬ್ರಹ್ಮಚರ್ಯ | Brahmacharya or Chastity |
| ಅಸಂಗ್ರಹ (ಅಪರಿಗ್ರಹ) | Non-Possession |
| ಶರೀರ ಶ್ರಮ | Physical Labour |
| ಅಸ್ವಾದ (ನಾಲಿಗೆ ಚಪಲ) | Control on the Palate |
| ಸರ್ವತ್ರ ಭಯವರ್ಜನ (ಅಭಯ) | Fearlessness |
| ಸರ್ವಧರ್ಮ ಸಮಾನತ್ವ | Equality of Religion |
| ಸ್ವದೇಶಿ | Swadeshi |
| ಸ್ಪರ್ಶ ಭಾವನೆ (ಅಸ್ಪೃಶ್ಯತಾ ನಿವಾರಣೆ) | Removal of Untouchability |

---

## ಏಳು ಸಾಮಾಜಿಕ ಪಾತಕಗಳು Seven Social Sins

| | |
|---|---|
| ತತ್ವರಹಿತ ರಾಜಕಾರಣ | Politics without Principles |
| ದುಡಿಮೆ ಇಲ್ಲದ ಸಂಪತ್ತು | Wealth without Work |
| ಆತ್ಮಸಾಕ್ಷಿ ಇಲ್ಲದ ಸಂತೋಷ | Pleasure without Conscience |
| ಚಾರಿತ್ರ್ಯವಿಲ್ಲದ ಶಿಕ್ಷಣ | Education without Character |
| ನೀತಿ ಇಲ್ಲದ ವ್ಯಾಪಾರ | Commerce without Morality |
| ಮಾನವೀಯತೆ ಇಲ್ಲದ ವಿಜ್ಞಾನ | Science without Humanity |
| ತ್ಯಾಗ ಇಲ್ಲದ ಪೂಜೆ | Worship without Sacrifice |

– ಮಹಾತ್ಮ ಗಾಂಧೀಜಿ

# ಹದಿನೆಂಟು ರಚನಾತ್ಮಕ ಕಾರ್ಯಗಳು

## 18 CONSTRUCTIVE PROGRAMMES

| | |
|---|---|
| ಮತೀಯ ಐಕ್ಯತೆ | Communal Unity |
| ಅಸ್ಪೃಶ್ಯತಾ ನಿವಾರಣೆ | Removal of Untouchability |
| ಪಾನನಿರೋಧ | Prohibition |
| ಖಾದಿ | Khadi |
| ಇತರೆ ಗ್ರಾಮೋದ್ಯೋಗ | Other village industries |
| ಗ್ರಾಮ ನೈರ್ಮಲ್ಯ | Village Sanitation |
| ಮೂಲ ಶಿಕ್ಷಣ | Basic Education |
| ವಯಸ್ಕರ ಶಿಕ್ಷಣ | Adult Education |
| ಮಹಿಳಾ ಸಬಲೀಕರಣ | Women Empowerment |
| ಆರೋಗ್ಯ ಮತ್ತು ಶುಚಿತ್ವ ಶಿಕ್ಷಣ | Hygiene & Health Education |
| ಪ್ರಾದೇಶಿಕ ಭಾಷೆ | Provincial Languages |
| ರಾಷ್ಟ್ರಭಾಷೆ | National Language |
| ಆರ್ಥಿಕ ಸಮಾನತೆ | Economic Equality |
| ರೈತರ ಸಬಲೀಕರಣ | Empowerment of Farmers |
| ಕಾರ್ಮಿಕರ ಸಬಲೀಕರಣ | Empowerment of Labours |
| ಆದಿವಾಸಿ ಸಬಲೀಕರಣ | Tribal Empowerment |
| ಕುಷ್ಠರೋಗ ನಿರ್ಮೂಲನೆ | Cure of Lepracy |
| ವಿದ್ಯಾರ್ಥಿ | Students |

ಸ್ವರಾಜ್ಯ ಎಂದರೆ ಅದು ಒಂದು ವಿಶಿಷ್ಟ ಜೀವನವಿಧಾನ, ಒಂದು ಮೌಲ್ಯಸಂಹಿತೆಯ ಅಂಗೀಕಾರ. ಕೇವಲ ರಾಜಕೀಯ ಬದಲಾವಣೆ ಅಲ್ಲ, ನೈತಿಕ ನಿಷ್ಠೆಯ, ಸುಸಂಘಟಿತ ನಿತ್ಯಜಾಗೃತ ಮತ್ತು ಪರಿಣಾಮಕಾರೀ ಜನಶಕ್ತಿ ನಿರ್ಮಾಣ, ಇವು ಗಾಂಧೀ ಮಾರ್ಗದ ಪರಮ ಗುರಿಯಾದ ಸ್ವರಾಜ್ಯ.

– ಕೆ. ಎಸ್. ನಾರಾಯಣಸ್ವಾಮಿ

ಭಾರತದ ಆತ್ಮ ಗ್ರಾಮಗಳಲ್ಲಿವೆ, ಎಂದು ಹೇಳುತ್ತಾ ಗಾಂಧೀಜಿ ಅವರು ಗ್ರಾಮಗಳ ಸ್ವರಾಜ್ಯದಿಂದ ಮಾತ್ರ ಸಶಕ್ತ ಭಾರತವನ್ನು ಕಟ್ಟಬಹುದೆಂಬುದನ್ನು ಸವಿಸ್ತಾರವಾಗಿ ಈ ಕೃತಿಯಲ್ಲಿ ಹೇಳುತ್ತಾರೆ.

– ಡಾ. ವೂಡೇ ಪಿ. ಕೃಷ್ಣ

ಭೂಭಾಗವೊಂದರಲ್ಲಿನ ಪ್ರಜೆಗಳು ತಮ್ಮದೇ ರಾಜ್ಯ, ದೇಶ ಕಟ್ಟಿಕೊಳ್ಳಬೇಕೆಂದು ಇಚ್ಛಿಸಿದಲ್ಲಿ ಯಾವ ಸ್ವರೂಪದ, ಯಾವ ತಳಹದಿಯ ಮತ್ತು ಯಾವ ಮೂಲಾಧಾರಗಳಿಂದ ಸ್ವರಾಜ್ಯವನ್ನು ನಿರ್ಮಾಣ ಮಾಡಿಕೊಳ್ಳಬೇಕೆಂಬುದನ್ನು ಗಾಂಧೀಜಿ ಅವರು ಇಲ್ಲಿ ವಿವರಿಸುತ್ತಾರೆ. ಅವರ ಪೂರ್ಣ ಸ್ವರಾಜ್ಯದ ಸಿದ್ಧಾಂತವು ಈ ದೇಶದ ಕಟ್ಟಕಡೆಯ ಜನರ ದುಡಿಮೆ, ಬದುಕು, ಸ್ವಾತಂತ್ರ್ಯ ಮತ್ತು ಸಮಾನತೆಯ ಬುನಾದಿ ಮೇಲೆ ನಿಂತಿದೆ.

– ಇಂದಿರಾ ಕೃಷ್ಣಪ್ಪ

**ಕರ್ನಾಟಕ ಗಾಂಧೀ ಸ್ಮಾರಕ ನಿಧಿ**

ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು